ಪರಮದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಅಪಾರ ಸಿರಿ-ಸಂಪತ್ತು, ಆಡಂಬರದ ಬದುಕು, ಅಧಿಕಾರ ಎಲ್ಲವೂ ಮಾನವನ ಮನಸ್ಸಿಗೆ ಶಾಂತಿ ಒದಗಿಸುತ್ತದೆಯೆಂಬ ಭಾವನೆ ಸಾರ್ವತ್ರಿಕವಾಗಿದೆ. ಆದರೆ ಅದು ಸರಿಯಲ್ಲವೆಂದು ಅನುಭವಗಳು ಸಾಬೀತುಪಡಿಸುತ್ತದೆ. ಅವೆಲ್ಲವನ್ನೂ ಹೊಂದಿಯೂ ಮನಃಶಾಂತಿ ಲಭಿಸದೆ ತಮ್ಮ ಬದುಕನ್ನೇ ಕೊನೆಗಾಣಿಸಿದವರ ಸಂಖ್ಯೆ ಅದೆಷ್ಟೋ.

ಇಡೀ ಜಗತ್ತನ್ನು ಅಧೀನಪಡಿಸಲು ಹೊರಟ ಹಿಟ್ಲರ್ ಆತ್ಮಹತ್ಯೆ ಮಾಡಿಕೊಂಡ. ಮರ್ಲಿನ್ ಮನ್ರೋಳಂತಹ ಜಗದ್ವಿಖ್ಯಾತ ಸಿನೆಮಾ ನಟಿ ತನ್ನ ಬಳಿ ಅಪಾರ ಸಂಪತ್ತು, ಆಕರ್ಷಕ ಸೌಂದರ್ಯ ಹೊಂದಿಯೂ ಮನಃಶಾಂತಿಯನ್ನು ಅರಸುತ್ತಾ ನಿದ್ರಾಗುಳಿಗೆಗಳನ್ನು ಸೇವಿಸಿ ಕೊನೆಗೆ ಅದರಲ್ಲೇ ಅಂತ್ಯ ಕಂಡಳು. ಇಂತಹ ಅದೆಷ್ಟೋ ಉದಾಹರಣೆಗಳು ನಮ್ಮ ಮುಂದಿವೆ.

ಅಧಿಕಾರ ಹೊಂದಿದವರಿಗೆ ಅದು ಕಸಿಯಲ್ಪಡುವುದೋ ಎಂಬ ಭೀತಿಯಲ್ಲಿ ನಿದ್ರೆ ಹತ್ತುವುದಿಲ್ಲ. ಧನ ಕನಕಗಳನ್ನು ಹೊಂದಿದವರಿಗೆ ಕಳ್ಳಕಾಕರ, ದರೋಡೆಕೋರರ ಭೀತಿ ಕಾಡುತ್ತಿರುತ್ತದೆ. ಆದರೆ ನೈಜ ದೇವಭಕ್ತರಿಗೆ ಇದಾವುದೂ ಸಮಸ್ಯೆಯಲ್ಲ. ತನ್ನನ್ನು ಈ ಲೋಕಕ್ಕೆ ಪರೀಕ್ಷಾರ್ಥವಾಗಿ ಕಳಿಸಲಾಗಿದೆಯೆಂಬ ಸ್ಮರಣೆಯಿಂದಲೇ ಆತ ಜೀವನ ಸಾಗಿಸುತ್ತಾನೆ. ಸಿರಿವಂತಿಕೆ, ಅಧಿಕಾರ ಸಿಕ್ಕಿದಾಗ ಆತ ಬೀಗುವುದಿಲ್ಲ. ಇತರರ ಮೇಲೆ ದೌರ್ಜನ್ಯವೆಸಗುವುದಿಲ್ಲ. ಕೀಳಾಗಿ ಕಾಣುವುದಿಲ್ಲ. ಬಡತನ, ಅನಾರೋಗ್ಯ ಬಂದಾಗ, ಅಧಿಕಾರ ಕಳೆದುಕೊಂಡಾಗ ಆತ ನಿರಾಶನಾಗುವುದಿಲ್ಲ. ಇದ್ದಾಗಲೂ ಇಲ್ಲದಾಗಲೂ ಅವನ ಸ್ಥಿತಿ ಒಂದೇ ಆಗಿರುತ್ತದೆ. ನೆಮ್ಮದಿಯಿಂದ ಆತ ಬದುಕುತ್ತಾನೆ.

ಮನಃಶಾಂತಿಯ ಒಳಗುಟ್ಟು ದೇವಸ್ಮರಣೆಯಾಗಿದೆ. ಜೀವನದ ಸಕಲ ರಂಗಗಳಲ್ಲಿ ದೇವಸ್ಮರಣೆಯನ್ನು ಮೈಗೂಡಿಸಿಕೊಂಡರೆ ಅವನಿಗೆ ಅನುನಿಮಿಷವೂ ಶಾಂತಿಯಿಂದ ಬದುಕುವುದು ಸಾಧ್ಯ. ಅದನ್ನೇ ಪವಿತ್ರ ಕುರ್‌ಆನ್ ಹೀಗೆ ಹೇಳಿದೆ- "ಕೇಳಿರಿ, ದೇವಸ್ಮರಣೆಯಿಂದಲೇ ಮನಃಶಾಂತಿಯಿದೆ."

ಮನಃಶಾಂತಿಯೆಂಬ ಈ ಪುಸ್ತಕವು ನೆಮ್ಮದಿಯ ಜೀವನಕ್ಕೆ, ತನ್ಮೂಲಕ ಪರಲೋಕದ ಶಾಶ್ವತ ವಿಜಯಕ್ಕೆ ಮಾರ್ಗದರ್ಶನ ಮಾಡುತ್ತದೆ. ಇದರ ಅಧ್ಯಯನವು ಅದಕ್ಕೆ ಪ್ರೇರಕವಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಪ್ರಾರ್ಥನೆ ಮತ್ತು ಮಾನವರು

ಪ್ರಾರ್ಥಿಸದ ಜನರಿಲ್ಲ. ಹಣ್ಣು ಹಂಪಲುಗಳನ್ನು ತಿಂದು ಬೇಟೆಯಾಡಿ ಬದುಕುತ್ತಿದ್ದ ಮಾನವರೂ ಕತ್ತಲೆ ಕವಿದ ಗುಹೆಗಳಲ್ಲಿ ಅಥವಾ ಮರದಬುಡ ಮತ್ತಿತರೆಡೆಗಳಲ್ಲಿ ಕುಳಿತು ಪ್ರಾರ್ಥಿಸುತ್ತಿದ್ದರು. ಅವರು ಬರಡುಭೂಮಿಯು ತೇವಭರಿತವಾಗಲಿಕ್ಕಾಗಿ, ಉತ್ತಮ ಬೆಳೆಗಾಗಿ, ಜಾನುವಾರುಗಳಿಗೆ ರೋಗಬಾರದಿರಲಿಕ್ಕಾಗಿ, ವೈರಿಯ ನಿರ್ಮೂಲನಕ್ಕಾಗಿ ಪ್ರಾರ್ಥಿಸುತ್ತಿದ್ದರು. ಆತ್ಮಶಾಂತಿಗಾಗಿಯೂ ಇಹ ಮತ್ತು ಪರಲೋಕದಲ್ಲಿ ಸಂಪತ್ಸಮೃದ್ಧಿಯ ಅನುಗ್ರಹಗಳಿಗಾಗಿಯೂ ಮಾನವರು ಪ್ರಾರ್ಥಿಸುತ್ತಾರೆ.

ಸೋಮಾರಿಗಳೂ ಪ್ರಾರ್ಥನೆಗಾಗಿ ಸಮಯ ವ್ಯಯಿಸುತ್ತಾರೆ. ಒಂಟಿಯಾಗಿಯೂ ಸಾಮೂಹಿಕವಾಗಿಯೂ ಅವರು ಪ್ರಾರ್ಥಿಸುತ್ತಾರೆ. ಪ್ರಾರ್ಥನೆಯನ್ನು ಮಾರ್ಗವಾಗಿ ಅಂಗೀಕರಿಸುತ್ತಾರೆ. ಪ್ರಾರ್ಥನೆಯನ್ನು ಜೀವನಗೊಳಿಸುತ್ತಾರೆ. ಪ್ರಾರ್ಥನೆಯಲ್ಲಿ ಸ್ವಯಂ ಅರ್ಪಿಸುತ್ತಾರೆ. ಪ್ರಾರ್ಥನೆಯಲ್ಲಿ ಶಾಂತಿಯನ್ನು ಅರಸುತ್ತಾರೆ.

ಪ್ರಾರ್ಥನೆಯು ಧರ್ಮಾನುಷ್ಠಾನ ಮತ್ತು ವಿಶ್ವಾಸ ಸಿದ್ಧಾಂತಗಳಿಗೆ ಸಂಬಂಧ ಪಟ್ಟಿದ್ದೆಂದು ಹೇಳ ಬಹುದಾದರೂ ಪ್ರಾರ್ಥನೆಗೆ ಅದಕ್ಕಿಂತ ಹೆಚ್ಚಿನ ಆಯಾಮಗಳಿವೆ. ಮನಸಾ ವಾಚಾ ಯಾವುದೇ ಧರ್ಮದೊಂದಿಗೆ ಸಂಬಂಧವಿಲ್ಲದವರೂ ಕೆಲವೊಮ್ಮೆ ಪ್ರಾರ್ಥಿಸುತ್ತಾರೆ. ಜೀವನದಲ್ಲಿ ಒಮ್ಮೆಯಾದರೂ ಪ್ರಾರ್ಥಿಸದವರಿರಬಹುದೇ ಎಂಬುದು ಸಂದೇಹಾಸ್ಪದ. ಪ್ರಾರ್ಥನೆಯನ್ನು ನಾನಾ ರೀತಿ ಮತ್ತು ಕ್ರಮದಿಂದ ನಡೆಸಲಾಗುತ್ತದೆ. ನಿಜವಾಗಿಯೂ ಯಾರೊಡನೆ ಪ್ರಾರ್ಥಿಸಬೇಕು, ಏನು ಪ್ರಾರ್ಥಿಸಬೇಕು, ಹೇಗೆ ಪ್ರಾರ್ಥಿಸಬೇಕು ಎಂಬಿತ್ಯಾದಿ ವಿಷಯಗಳನ್ನು ನಾವೊಮ್ಮೆ ವಿಶ್ಲೇಷಿಸೋಣ.

## ಯಾರೊಡನೆ ಪ್ರಾರ್ಥಿಸಬೇಕು?

ಯಾರೊಡನೆ ಪ್ರಾರ್ಥಿಸಬೇಕು ಎಂಬ ಪ್ರಶ್ನೆಗೆ ಮುಸ್ಲಿಮರ ಮಟ್ಟಿಗೆ ಕೇವಲ ಒಂದೇ ಉತ್ತರವಿದೆ. ಅಲ್ಲಾಹನೊಡನೆ. ಆದರೆ ಕ್ರೈಸ್ತರು ಏಸುವಿನೊಡನೆ ಪ್ರಾರ್ಥಿಸುತ್ತಾರೆ. ಏಸುವಾದರೋ ದೇವರಲ್ಲ. ಕೇವಲ ಪ್ರವಾದಿಯಾಗಿದ್ದಾರೆ. ಜಗತ್ತಿನಲ್ಲಿ ವಿವಿಧಕಾಲಗಳಲ್ಲಿ ಪ್ರವಾದಿಗಳು ಆಗಮಿಸಿದ್ದಾರೆ. ಮಾನವರು ಏಕವಿಶ್ವಾಸದಿಂದ ದೂರ ಸರಿದು ಬಹು ದೇವಾರಾಧನೆಯಲ್ಲಿ ಮುಳುಗಿದಾಗ ಅವರನ್ನು ಸರಿಯಾದ ಹಾದಿಯಲ್ಲಿ ಮುನ್ನಡೆಸಲಿಕ್ಕಾಗಿ

ಈ ಎಲ್ಲಾ ಪ್ರವಾದಿಗಳು ಪ್ರಯತ್ನಿಸಿದ್ದರು. ನಾವು ದೇವರೆಂದು ಆ ಪೈಕಿ ಯಾರೊಬ್ಬರೂ ಸಾರಲಿಲ್ಲ. ಆದರೆ ಕಾಲ ಕ್ರಮೇಣ ಅವರ ಮೇಲಿನ ಅತ್ಯಾದರ ಮತ್ತು ನಂಬಿಕೆಯ ಕಾರಣದಿಂದ ಜನರು ಅವರಿಗೆ ದಿವ್ಯತ್ವವನ್ನು ಕಲ್ಪಿಸಿ ಅವರನ್ನು ಆರಾಧ್ಯರಾಗಿ ಮಾಡಿದರು.

ಏಸುಕ್ರಿಸ್ತರು ಪ್ರವಾದಿಯಾಗಿದ್ದು ಇಹಪರಗಳಲ್ಲಿ ಆದರಣೀಯರು ಮತ್ತು ದೇವ ಸಾಮಿಪ್ಯ ಸಿದ್ಧಿಸಿದವರೆಂದು ಮುಸ್ಲಿಮರು ನಂಬುತ್ತಾರೆ. ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

ದೇವಚರರು ಹೇಳಿದ ಸಂದರ್ಭ:

**"ಓ ಮರ್ಯಮ್, ಅಲ್ಲಾಹನು ನಿನಗೆ ತನ್ನ ಒಂದು 'ಫರಮಾನಿನ' (ಆಜ್ಞೆಯ) ಸುವಾರ್ತೆ ನೀಡುತ್ತಾನೆ. ಅವನ ಹೆಸರು ಮರ್ಯಮಳ ಪುತ್ರ ಮಸೀಹ್ ಈಸಾ ಎಂದಿರುವುದು. ಅವನು ಇಹ ಮತ್ತು ಪರಗಳಲ್ಲಿ ಪ್ರತಿಷ್ಠಿತನಾಗುವನು. ಅಲ್ಲಾಹನ ನಿಕಟ ದಾಸರಲ್ಲಿ ಗಣಿಸಲ್ಪಡುವನು." (3:45)**

ವಾಸ್ತವದಲ್ಲಿ ಪ್ರವಾದಿ ಈಸಾರು ಮುಸ್ಲಿಮರ ಮಟ್ಟಿಗೆ ಓರ್ವ ಮಹಾನ್ ವ್ಯಕ್ತಿಯಾಗಿದ್ದಾರೆ. ಅವರು ಸರ್ವಥಾ ದೇವ ಅಥವಾ ದೇವ ಪುತ್ರರಾಗಿರಲಿಲ್ಲ. ನೈಜ ಕ್ರೈಸ್ತ ಮತ್ತು ಯಹೂದಿ ವಿಶ್ವಾಸದಂತೆಯೂ ಅವರು ದೇವ ಅಥವಾ ದೇವ ಪುತ್ರರಾಗಿರಲಿಲ್ಲ.

ಹಳೆಯ ಒಡಂಬಡಿಕೆಯಲ್ಲಿ ಹೀಗಿದೆ: "ಶಿಲ್ಪಿಯ ಕೆಲಸವಾಗಿರುವ ಮರದ ವಿಗ್ರಹವೂ ಲೋಹವಿಗ್ರಹವೂ ಯಹೋವನಿಗೆ ಹೇಯವಾದ್ದರಿಂದ ಅದನ್ನು ಮಾಡಿಸಿ ಗೋಪ್ಯವಾಗಿ ಪ್ರತಿಷ್ಠಾಪಿಸುವವನೂ ಶಾಪಗ್ರಸ್ತನು. ಜನರೆಲ್ಲರೂ "ಹೌದು" ಎಂದು ಉತ್ತರಿಸಬೇಕು."

**(ಧರ್ಮೋಪದೇಶ ಕಾಂಡ, 27:15)**

"ನೀವು ಸ್ತ್ರೀ ಪುರುಷರ ರೂಪವನ್ನಾಗಲಿ, ಭೂಮಿಯ ಮೇಲೆ ಸಂಚರಿಸುವ ಮೃಗದ ರೂಪವನ್ನಾಗಲಿ, ಆಕಾಶದಲ್ಲಿ ಹಾರಾಡುವ ಪಕ್ಷಿಯ ರೂಪವನ್ನಾಗಲಿ, ನೆಲದ ಮೇಲೆ ಹರಿದಾಡುವ ಕ್ರಿಮಿ-ಕೀಟಗಳ ರೂಪವನ್ನಾಗಲಿ, ಭೂಮಿಯ ಕೆಳಗಣ ನೀರಿನಲ್ಲಿರುವ ಮೀನಿನ ರೂಪವನ್ನಾಗಲಿ, ದೇವರ ಸ್ವರೂಪವೆಂದು ಮಾಡಿಕೊಂಡು ಭ್ರಷ್ಟರಾಗಬಾರದು." **(4:16,18)**

"ನಿಮ್ಮ ದೇವರಾದ ಯಹೋವನು ನಿಮ್ಮ ಸಂಗಡ ಮಾಡಿರುವ ನಿಬಂಧನೆಯನ್ನು ನೀವು ಮರೆತು ಪೂಜಿಸ ಬೇಡಿರೆಂದು ಆತನು ನಿಷೇಧಿಸಿದ ಯಾವ ವಸ್ತುವಿನ ವಿಗ್ರಹವನ್ನೂ ಮಾಡಿಕೊಳ್ಳಬಾರದು. ನಿಮ್ಮ ದೇವರಾದ ಯಹೋವನು ತನಗೆ ಸಲ್ಲಬೇಕಾದ ಗೌರವವನ್ನು ಮತ್ತೊಬ್ಬನಿಗೆ ಸಲ್ಲಗೊಡಿಸದೆ ಉರಿಯುವ ಬೆಂಕಿಯಂತೆ(ದ್ರೋಹಿಗಳನ್ನು) ದಹಿಸಿಬಿಡುವವನಾಗಿರುವನೆಂದು ತಿಳಿಯಿರಿ." **(4:23,24)**

ನೀನು ದಾಸ್ಯತ್ವದಲ್ಲಿರುವ ಐಗುಪ್ತ ದೇಶದೊಳಗಿಂದ ನಿನ್ನನ್ನು ಬಿಡುಗಡೆ ಮಾಡಿದ ಯಹೋವನೆಂಬ ನಿನ್ನ ದೇವರು ನಾನೇ. ನಾನಲ್ಲದೆ ನಿನಗೆ ಬೇರೆ ದೇವರುಗಳೂ ಇರಬಾರದು. ಯಾವ ಮೂರ್ತಿಯನ್ನೂ ಮಾಡಿಕೊಳ್ಳಬಾರದು. ಅವುಗಳಿಗೆ ಅಡ್ಡಬೀಳಲೂ ಬಾರದು. ಪೂಜೆ ಮಾಡಲೂ ಬಾರದು. **(ಧರ್ಮೋಪದೇಶ ಕಾಂಡ, 5:6,9)**

ಮತ್ತಾಯ, ಮಾರ್ಕ ಮತ್ತು ಲೂಕ ಎಂಬಿವರು, ಈ ಮೂವರು ಆರಂಭದ ಸುವಾರ್ತೆಗಾರರಾಗಿದ್ದಾರೆ. ನಾಲ್ಕು ಸುವಾರ್ತೆಗಳ ಪೈಕಿ ಮೂರರಲ್ಲಿಯೂ ಏಸುರನ್ನು ಓರ್ವ

ಮಾನವನೆಂದೇ ಪರಿಗಣಿಸಲಾಗಿದೆ. "ನೀವು ದೇವನ ಆಜ್ಞೆಯನ್ನು ಬಿಟ್ಟು ಮನುಷ್ಯರು ಕಲ್ಪಿಸಿದ ಸಂಪ್ರದಾಯವನ್ನು ಹಿಡಿದಿದ್ದೀರಿ" ಎಂದು ಮಾರ್ಕನ ಸುವಾರ್ತೆಯಲ್ಲಿದೆ. **(7:8)**

ಶೈತಾನನು ದೇವರಲ್ಲದ ಬೇರೊಂದನ್ನು ಆರಾಧಿಸಲುದ್ಯುಕ್ತವಾದಾಗ ಏಸುಕ್ರಿಸ್ತ ಆತನನ್ನು ಆಕ್ಷೇಪಿಸಿರುವುದಾಗಿ ಮತ್ತಾಯನ ಸುವಾರ್ತೆಯಲ್ಲಿ ದಾಖಲಿಸಲಾಗಿದೆ. "ಸೈತಾನನೇ ನೀನು ತೊಲಗಿ ಹೋಗು. ನಿನ್ನ ದೇವರಾಗಿರುವ ಕರ್ತನಿಗೆ ಅಡ್ಡಬಿದ್ದು ಆತನೊಬ್ಬನನ್ನೇ ಆರಾಧಿಸಬೇಕು." **(4:10)**

ಕೆಲವು ಅಧಿಕಾರಿಗಳು ಏಸುಕ್ರಿಸ್ತನನ್ನು ಒಳ್ಳೆಯ ಬೋಧಕನೆಂದು ಕರೆದಾಗ "ನನ್ನನ್ನು ಒಳ್ಳೆಯವನೆಂದು ಯಾಕೆ ಹೇಳುತ್ತೀ?, ದೇವನೊಬ್ಬನ ಹೊರತು ಮತ್ಯಾವನೂ ಒಳ್ಳೆಯವನಲ್ಲ ಎಂದು ಏಸು ಹೇಳಿರುವುದಾಗಿ ಲೂಕನ ಸುವಾರ್ತೆಯಲ್ಲಿದೆ." **(18:19)**

ಇಸ್ರಾಯೇಲ್ ಜನವೇ ಕೇಳು, ನನ್ನ ಮೊದಲ ಆಜ್ಞೆಯು, ನಮ್ಮ ದೇವರಾದ ಕರ್ತನು ಒಬ್ಬನೇ ದೇವರು ಎಂಬುದಾಗಿದೆಯೆಂದು ಏಸು ಹೇಳಿರುವುದಾಗಿ ಮಾರ್ಕನ ಸುವಾರ್ತೆಯಲ್ಲಿದೆ.

ದೇವನನ್ನು ತಂದೆಯೆಂದೂ ಏಸುಕ್ರಿಸ್ತರನ್ನು ಪುತ್ರನೆಂದೂ ಆಲಂಕಾರಿಕವಾಗಿ ವರ್ಣಿಸಲಾಗಿದೆಯೆಂದು ಈ ಕೆಳಗಿನ ವಚನಗಳಿಂದ ನಾವು ಗ್ರಹಿಸಬಹುದಾಗಿದೆ. "ಶಾಂತಿ ಯುಂಟು ಮಾಡುವಾತನು ಭಾಗ್ಯವಂತರು. ಅವರು ದೇವರ ಪುತ್ರನೆಂದು ಕರೆಯಲ್ಪಡುವರು." ಎಂದು ಏಸುಕ್ರಿಸ್ತರು ಶಿಷ್ಯರಿಗೆ ಉಪದೇಶಿಸಿರುವುದಾಗಿ ಮತ್ತಾಯನ ಸುವಾರ್ತೆ ಯಲ್ಲಿದೆ. ಯೋಹಾನನು ಬರೆದ ಸುವಾರ್ತೆಯಲ್ಲಿ ಏಸುಕ್ರಿಸ್ತರು ಮಗ್ದಲದ ಮರಿಯರೊಡನೆ ಹೇಳುತ್ತಾರೆ:

"ನನ್ನ ಸಹೋದರರ ಬಳಿ ಹೋಗಿ ಅವರೊಡನೆ ಹೇಳು. ನಾನು ನನ್ನ ತಂದೆಯೂ ನಿಮ್ಮ ತಂದೆಯೂ ನನ್ನ ದೇವರೂ ನಿಮ್ಮ ದೇವರೂ ಆಗಿರುವಾತನ ಬಳಿಗೆ ಏರಿ ಹೋಗುತ್ತೇನೆ." **(20:17)**

ರೆವರೆಂಡ್ ಚಾರ್ಲ್ಸ್ ಎಂಡರ್ಸನ್ ಸ್ಕಾಟ್ ಎಂಬ ಕ್ರೈಸ್ತ ವಿದ್ವಾಂಸ ಎನ್ ಸೈಕ್ಲೋಪೀಡಿಯ ಬ್ರಿಟಾನಿಕದ 14ನೆಯ ಆವೃತ್ತಿಯಲ್ಲಿ Jesus Christ ಎಂಬ ಶೀರ್ಷಿಕೆಯಲ್ಲಿ ದಾಖಲಿಸಿರುವುದು ಗಮನಾರ್ಹವಾಗಿದೆ.

"ಆರಂಭದ ಮೂರು ಸುವಾರ್ತೆಗಳಲ್ಲಿ ಏಸುಕ್ರಿಸ್ತರನ್ನು ಓರ್ವ ಮಾನವನಿಗಿಂತ ಮಿಗಿಲಾಗಿ ತಿಳಿದುಕೊಂಡಿಲ್ಲ. ದೇವನ ಆತ್ಮದಿಂದ ಅನುಗ್ರಹೀತನಾದ ಓರ್ವ ಮಾನವ. ಆತನನ್ನು ದೇವ ಪುತ್ರನೆಂದು ಕರೆಯುವುದಿದ್ದರೆ ಅದು ಅಷ್ಟೊಂದು ಸರಿಯಾದೀತೇ?"

ಮತ್ತಾಯನು ಅವರನ್ನು ಬಡಗಿಯ ಮಗನೆಂದು ವರ್ಣಿಸಿದ್ದಾನೆ. ಒಂದೆಡೆ ಪೇತ್ರನು ಅವರನ್ನು ಮಸೀಹನಾಗಿ ಅಂಗೀಕರಿಸಿದ ಬಳಿಕ "ಆತನನ್ನು ಬೇರೆಡೆಗೆ ಕರೆದು ಗದರಿಸಲಾ ರಂಭಿಸಿದನು" ಎಂದು ಹೇಳಲಾಗಿದೆ **(ಮತ್ತಾಯ, 16:22)**

"ನಜ್ರೇತಿನವನಾದ ಯೇಸು, ದೇವರ ಮುಂದೆ ಮತ್ತು ಮನುಷ್ಯರ ಮುಂದೆ ಕೃತ್ಯದಲ್ಲಿಯೂ ಮಾತಿನಲ್ಲಿಯೂ ಸಮರ್ಥನಾದ ಪ್ರವಾದಿಯಾಗಿದ್ದನು" ಎಂದು ಲೂಕ,

24:19ರಲ್ಲಿ ಮತ್ತು "ಹೇಗೂ ನಾನು ಈ ಹೊತ್ತು ನಾಳೆ ನಾಡಿದು ಸಂಚಾರ ಮಾಡಬೇಕು; ಪ್ರವಾದಿಯಾದವನು ಯೆರೂಸಲೇಮಿನಲ್ಲಿಯೇ ಹೊರತು ಬೇರೆ ಪಟ್ಟಣದಲ್ಲಿ ಕೊಲ್ಲಲ್ಪಡ ಕೂಡದಷ್ಟೆ" ಎಂದು ಲೂಕ, 13:33ರಲ್ಲಿ ಹೇಳಿದೆ. ಅವರು ತಮ್ಮನ್ನು ಯಾವಾಗಲೂ ಮಾನವ ಪುತ್ರನೆಂದು ಹಲವೊಮ್ಮೆ ಹೇಳಿಕೊಂಡಿದ್ದಾರೆ. ಆದರೆ ದೇವಪುತ್ರನೆಂದು ಒಮ್ಮೆಯೂ ಹೇಳಿಲ್ಲ. ವಾಸ್ತವದಲ್ಲಿ ಸಂತ ಪೌಲನು ಏಸುರನ್ನು ಸಾಂಕೇತಿಕ ಅರ್ಥದಲ್ಲಿ ದೇವಪುತ್ರ ಪದವಿಗೇರಿಸಿದ್ದನು.

ಎನ್‌ಸೈಕ್ಲೋಪೀಡಿಯ ಬ್ರಿಟಾನಿಕದಲ್ಲಿ ಕ್ರಿಶ್ಚಿಯಾನಿಟಿ(Christianity) ಎಂಬ ಶೀರ್ಷಿಕೆಯಲ್ಲಿ ರೆವರೆಂಡ್ ಜಾರ್ಜ್ ವಿಲ್ಲಿಯಮ್ ನಾಕ್ಸ್ ಬರೆದ ಲೇಖನದಲ್ಲಿ ಹೀಗೆ ದಾಖಲಿಸಲಾಗಿದೆ:

"ತ್ರಿಏಕತ್ವ ವಿಶ್ವಾಸದ ಅಚ್ಚು ಯವನ ನಿರ್ಮಿತವಾಗಿದೆ. ಪುತ್ರ, ಪಿತ, ಪವಿತ್ರಾತ್ಮ ಎಂಬುದು ಯಹೂದಿಗಳಿಂದ ಬಂದಿದೆ."

ಕ್ರಿ.ಶ. ಮೂರನೆಯ ಶತಮಾನದ ಕೊನೆಯ ವೇಳೆಗೆ ಏಸುಕ್ರಿಸ್ತರನ್ನು ಸಾಮಾನ್ಯವಾಗಿ ವಚನದ ದೈವಿಕ ಅವತಾರವೆಂದು ನಂಬಲಾಗುತ್ತಿತ್ತು. ಅವರಿಗೆ ದೇವತ್ವವನ್ನು ತೊಡಿಸಿರಲಿಲ್ಲ. ನಾಲ್ಕನೆ ಶತಮಾನದಲ್ಲಿ ಈ ಕುರಿತು ತೀವ್ರ ವಾದ-ಪ್ರತಿವಾದ ನಡೆಯಿತು. ಕ್ರಿ.ಶ. 325ರಲ್ಲಿ ಸೇರಿದ ನಿಕಯ್ಯ ಕೌನ್ಸಿಲ್ ಮಸೀಹ ದೇವನೆಂಬುದು ಕ್ರೈಸ್ತರ ವಿಶ್ವಾಸದಲ್ಲಿ ಸೇರಿದೆಯೆಂದು ಸಾರಿತು. ಅಂತೆಯೇ ತ್ರಿಏಕತ್ವವು ಒಂದು ಅವಿಭಾಜ್ಯ ಘಟಕವಾಯಿತು. ಮಸೀಹರ ವ್ಯಕ್ತಿತ್ವದಲ್ಲಿ ದಿವ್ಯತ್ವ ಮತ್ತು ಮಾನವೀಯತೆಯ ಪರಸ್ಪರ ಸಂಬಂಧ ಹೇಗಿದೆಯೆಂದು 451ರಲ್ಲಿ ಸೇರಿದ ಕಾಲ್ಸಿಡನ್ ಕೌನ್ಸಿಲ್ ಹೀಗೆ ವಿವರಿಸಿದೆ. "ಮಸೀಹ್‌ರ ಸತ್ತೆಯಲ್ಲಿ ಎರಡು ಪರಿಪೂರ್ಣ ಸ್ವಭಾವಗಳು ಮೇಳೈಸಿವೆ. ದೇವ ಸ್ವಭಾವ ಮತ್ತು ಮಾನವ ಸ್ವಭಾವ. ಎರಡೂ ಪರಸ್ಪರ ಏಕೀಭವಿಸಿದ ಬಳಿಕ ಪ್ರತಿಯೊಂದೂ ಅದರ ವೈಶಿಷ್ಟ್ಯಗಳಲ್ಲಿ ಯಾವುದೇ ಬದಲಾವಣೆಯಿಲ್ಲದೆ ಉಳಿಯುತ್ತವೆ." 675ರಲ್ಲಿ ಸೇರಿದ ಮೂರನೆ ಕೌನ್ಸಿಲ್‌ನಲ್ಲಿ ಮತ್ತೊಂದು ವಿಷಯವನ್ನು ಸೇರಿಸಿದರು. "ಉಭಯ ಸ್ವಭಾವಗಳಿಗೂ ವಿಭಿನ್ನ ಇಚ್ಛೆಗಳಿವೆ. ಅರ್ಥಾತ್ ಏಸುಕ್ರಿಸ್ತರು ಎರಡು ವಿಭಿನ್ನ ಇಚ್ಛೆಗಳ ಒಡೆಯರಾಗಿದ್ದಾರೆ."

ಮೇಲಿನ ಉದ್ಧರಣೆಗಳಿಂದ ಕ್ರೈಸ್ತ ಧರ್ಮವು ವಿಗ್ರಹಾರಾಧನೆಯನ್ನು ಎಷ್ಟರ ಮಟ್ಟಿಗೆ ವಿರೋಧಿಸಿದೆ ಮತ್ತು ದೇವನಲ್ಲಿಯೇ ವಿಶ್ವಾಸವಿರಿಸಬೇಕು, ದೇವನ ಹೊರತು ಅನ್ಯರನ್ನು ಆರಾಧಿಸಬಾರದು ಅಥವಾ ಅನ್ಯಶಕ್ತಿಗಳನ್ನು ಪೂಜಿಸಬಾರದೆಂಬುದೂ ಏಸುಕ್ರಿಸ್ತರಿಗೆ ದೇವತ್ವವನ್ನು ಹೇಗೆ ಕಲ್ಪಿಸಲಾಯಿತೆಂಬುದೂ ವ್ಯಕ್ತವಾಯಿತು. ಏಸುಕ್ರಿಸ್ತ (ಪ್ರವಾದಿ ಈಸಾ)ರ ಮೇಲಿನ ಮಿತಿಮೀರಿದ ಭಕ್ತಿ ಭಾವವು ಅವರಲ್ಲಿ ದಿವ್ಯತ್ವವನ್ನು ಸಂಕಲ್ಪಿಸಿ ದೇವನ ಹೊರತು ಅವರನ್ನೇ ಆರಾಧಿಸಲು ಹೇತುವಾಯಿತೆಂಬುದು ಸ್ಪಷ್ಟ. ಆದ್ದರಿಂದಲೇ ಕುರ್‌ಆನಿನ ವಚನದಲ್ಲಿ ಈ ವಿಷಯವನ್ನು ಮತ್ತೊಮ್ಮೆ ಸ್ಪಷ್ಟಪಡಿಸಲಾಗಿದೆ.

"ಓ ಗ್ರಂಥದವರೇ, ನಿಮ್ಮ ಧರ್ಮದಲ್ಲಿ ನೀವು ಹದಮೀರಬೇಡಿರಿ, ಸತ್ಯದ ಹೊರತು ಇನ್ನೇನನ್ನೂ ಅಲ್ಲಾಹನ ಮೇಲೆ ಹೊರಿಸಬೇಡಿರಿ. ಮರ್ಯಮರ ಪುತ್ರ ಈಸಾ ಮಸೀಹರು

ಅಲ್ಲಾಹನ ಸಂದೇಶವಾಹಕರಾಗಿದ್ದರೇ ವಿನಾ ಇನ್ನೇನೂ ಆಗಿರಲಿಲ್ಲ. ಅವರು, ಅಲ್ಲಾಹನು ಮರ್ಯಮರ ಕಡೆಗೆ ಕಳುಹಿಸಿದ ಒಂದು ಫರಮಾನು (ಆಜ್ಞೆ) ಆಗಿದ್ದರು ಮತ್ತು ಅಲ್ಲಾಹನ ಕಡೆಯಿಂದ (ಮರ್ಯಮರ ಗರ್ಭಾಶಯದಲ್ಲಿ ಶಿಶುವಿನ ರೂಪ ಧಾರಣ ಮಾಡಿದ) ಒಂದು ಆತ್ಮವಾಗಿದ್ದರು. ಆದುದರಿಂದ ಅಲ್ಲಾಹ್ ಮತ್ತು ಸಂದೇಶ ವಾಹಕರ ಮೇಲೆ ವಿಶ್ವಾಸ ವಿಡಿರಿ. ಮೂವರಿದ್ದಾರೆನ್ನಬೇಡಿರಿ- ಇದನ್ನು ತೊರೆಯಿರಿ. ಇದು ನಿಮಗೇ ಉತ್ತಮ. ಅಲ್ಲಾಹನಂತೂ ಏಕಮಾತ್ರ ಆರಾಧ್ಯನಾಗಿರುವನು. ಅವನಿಗೊಬ್ಬ ಪುತ್ರನಿದ್ದಾನೆನ್ನಲು, ಅವನು ಅದರಿಂದ ಪರಿಶುದ್ಧನಾಗಿರುತ್ತಾನೆ. ಭೂಮಿ-ಆಕಾಶಗಳ ಸಕಲ ವಸ್ತುಗಳೂ ಅವನ ಸೊತ್ತು ಮತ್ತು ಅವುಗಳ ಸಂರಕ್ಷಣೆಗೆ ಅಲ್ಲಾಹನೇ ಸಾಕು." **(4:171)**

ಗ್ರಂಥದವರಲ್ಲಿ ಯಹೂದಿಯರೂ ಕ್ರೈಸ್ತರೂ ಸೇರಿದ್ದಾರೆ. ಮಸೀಹರ ವಿರೋಧ ಮತ್ತು ನಿರಾಕರಣೆಯಲ್ಲಿ ಯಹೂದಿಯರು ಮಿತಿಮೀರಿದಾಗ, ಏಸುರ ಮೇಲಿನ ಭಕ್ತಿ ವಿಶ್ವಾಸದಲ್ಲಿ ಮಿತಿಮೀರಿರುವುದೇ ಕ್ರೈಸ್ತರಿಂದಾಗಿರುವ ತಪ್ಪು.

ಶ್ರೀ ನಾರಾಯಣಗುರು ಸಮಾಜ ಸುಧಾರಕರಾಗಿದ್ದರು. ಅವರು ಆರಾಧನೆಗಾಗಿ ಒಂದು ದೊಡ್ಡ ಮಂದಿರವನ್ನು ನಿರ್ಮಿಸಿದರು. ಅಲ್ಲಿ ಯಾವ ಆರಾಧ್ಯ ವಸ್ತುವನ್ನಿರಿಸಬೇಕೆಂಬ ಬಗ್ಗೆ ಶಿಷ್ಯರಲ್ಲಿ ವಿವಾದವೇರ್ಪಟ್ಟಿತು. ಸಮಸ್ಯೆಯು ಗುರುವಿನ ಬಳಿಗೆ ಬಂತು. ಯಾವುದೇ ವಿಗ್ರಹದ ಅಗತ್ಯವಿಲ್ಲ, ಕೇವಲ ದೇವನನ್ನು ಪ್ರಾರ್ಥಿಸಿದರೆ ಸಾಕೆಂದು ಹಲವು ಬಾರಿ ಹೇಳಿದರೂ ಶಿಷ್ಯರಿಗೆ ತೃಪ್ತಿಯಾಗಲಿಲ್ಲವೆಂದು ಮನಗಂಡು ಅಲ್ಲಿದ್ದ ಒಂದು ಸಣ್ಣ ಕಲ್ಲನ್ನು ಹೆಕ್ಕಿ, "ಇದು ನಿಮ್ಮ ಆರಾಧ್ಯ ವಸ್ತುವಾಗಿರಲೆಂದು" ಹೇಳಿದರು. ಇನ್ನೊಂದು ಸಂದರ್ಭದಲ್ಲಿ ಒಂದು ಸಣ್ಣ ಕನ್ನಡಿಯನ್ನು ನಾರಾಯಣ ಗುರು ಪ್ರತಿಷ್ಠಾಪಿಸಿದ್ದರು. ಅವರು ಈ ಪ್ರತಿಷ್ಠಾನಗಳಿಂದ ತಮ್ಮ ದೇವ ಕಲ್ಪನೆಯನ್ನು ಕ್ರಾಂತಿಕಾರಿ ರೀತಿಯಲ್ಲಿ ಬಹಿರಂಗ ಪಡಿಸಿದ್ದರು. ಆದರೆ ಕಾಲಕ್ರಮೇಣ ತೀರಾ ವಿಪರ್ಯಾಸ ಸಂಭವಿಸಿತು. ಅವರ ನಿಕಟ ಶಿಷ್ಯರು - ಅವರ ಆದರ್ಶಗಳನ್ನು ಪ್ರಚಾರ ಮಾಡಬೇಕಾದವರು - 'ಧರ್ಮ ಯಾವುದೇ ಆಗಿದ್ದರೂ ಮಾನವ ಉತ್ತಮನಾದರೆ ಸಾಕೆಂದು' ಘೋಷಿಸಿದ್ದ ಆ ಮಹಾತ್ಮನ ಮೂರ್ತಿಯನ್ನೇ ಇರಿಸಿ ಪೂಜಿಸಲಾರಂಭಿಸಿದರು.

ಮಂದಿರಗಳ ದ್ವಾರಗಳಲ್ಲಿ ಅಹಿಂದುಗಳಿಗೆ ಪ್ರವೇಶವಿಲ್ಲವೆಂದು ಬರೆದಿಡಲೂ ಅವರು ಹೇಸಲಿಲ್ಲ. ಮುಸ್ಲಿಮರಲ್ಲಿಯೂ ಇಂಥ ಅರೋಚಕ ಪ್ರಕ್ರಿಯೆಗಳು ಗೋಚರಿಸುತ್ತವೆ. ಪಾಂಡಿತ್ಯ ವಿಶ್ವಾಸಾದಿ ಕರ್ಮಗಳಿಂದ ಮಾನವನಿಗೆ ಶ್ರೇಷ್ಠತೆ ಪ್ರಾಪ್ತವಾಗುವುದಷ್ಟೆ. ಈ ಮಹಾ ಪುರುಷರೊಂದಿಗಿನ ಅಮಿತಾದರದಿಂದಾಗಿ ಅವರಲ್ಲಿ ದಿವ್ಯತ್ವವನ್ನು ಸಂಕಲ್ಪಿಸಿ ಕ್ರಮೇಣ ಅವರನ್ನು ಆರಾಧನಾ ಪಾತ್ರಗೊಳಿಸುತ್ತಾರೆ. ಅವರೊಡನೆ ತಮ್ಮ ಸಂಕಷ್ಟಗಳನ್ನು ತೋಡಿ ಕೊಳ್ಳುತ್ತಾರೆ. ಅಂತಹ ಜನರೊಡನೆ ಅಲ್ಲಾಹನು ಈ ರೀತಿ ಪ್ರಶ್ನಿಸುತ್ತಾನೆ. "ಯಾವುದನ್ನೂ ಸೃಷ್ಟಿಸಲಾಗದೆ ಸ್ವತಃ ಸೃಷ್ಟಿಸಲ್ಪಟ್ಟವುಗಳನ್ನು ಅಲ್ಲಾಹನ ಸಹಭಾಗಿಗಳಾಗಿ ಮಾಡುವವರು ಎಂತಹ ತಿಳಿಗೇಡಿಗಳು?" **(7:191)** ನಾವು ಆರಾಧಿಸುತ್ತಿರುವ ಅಲ್ಲಾಹನ ಹೊರತು ಇತರೆಲ್ಲವೂ ಅಲ್ಲಾಹನ ಸೃಷ್ಟಿಗಳಾಗಿವೆ, ಸೃಷ್ಟಿಗಳೊಂದಿಗೆ ಪ್ರಾರ್ಥಿಸುವ ಬದಲಿಗೆ ಅಲ್ಲಾಹನೊಡನೆ ನೇರವಾಗಿ ಪ್ರಾರ್ಥಿಸಬೇಕೆಂದು ಈ ವಚನದ ಸಾರಾಂಶ.

ಅಲ್ಲಾಹನು ಕೆಲವರನ್ನು ಉತ್ಕೃಷ್ಟಗೊಳಿಸಿದ್ದಾನೆ. ಅವರ ಮೂಲಕ ನಾವು ಅಲ್ಲಾಹನಲ್ಲಿ ಸಂಕಷ್ಟಗಳನ್ನು ತೋಡಿಕೊಂಡರೆ ಹೆಚ್ಚು ಉತ್ತಮವೆಂದು ಕೆಲವರು ವಾದಿಸುತ್ತಾರೆ. ನ್ಯಾಯಾಲಯದಲ್ಲಿ ನ್ಯಾಯಾಧೀಶರೊಡನೆ ನಮ್ಮ ವಿಷಯವನ್ನು ನೇರವಾಗಿ ಪ್ರಸ್ತಾಪಿಸುವ ಬದಲಾಗಿ ವಕೀಲರ ಮೂಲಕ ಹೇಳಿಸುತ್ತೇವಲ್ಲವೇ? ಆದ್ದರಿಂದ ಈ ಮಹಾಪುರುಷರಿಗೆ ಅಲ್ಲಾಹನ ಬಳಿ ಕೇವಲ ಓರ್ವ ವಕೀಲರ ಸ್ಥಾನವಿದೆ ಎಂದು ಮುಂತಾಗಿ ಅವರು ವಾದಿಸುತ್ತಾರೆ. ಇದು ತಪ್ಪು ಮತ್ತು ಪೊಳ್ಳುವಾದವಾಗಿದೆ. ಇಲ್ಲಿ ನ್ಯಾಯಾಧೀಶನಿಗೆ ಪ್ರಕರಣದ ಬಗ್ಗೆ ಯಾವೊಂದು ವಿಷಯವೂ ತಿಳಿದಿರಲಾರದು. ಕಕ್ಷಿದಾರರ ಪರಿಚಯವಿರಲಾರದು. ತಮ್ಮ ಸಮಸ್ಯೆಯನ್ನು ಮಂಡಿಸುವುದು ಹೇಗೆಂದು ಕಕ್ಷಿದಾರರಿಗೂ ತಿಳುವಳಿಕೆಯಿರಲಾರದು. ಆದ್ದರಿಂದಲೇ ಇಲ್ಲಿ ತೃತೀಯ ಕಕ್ಷಿಯೊಂದು ಅಗತ್ಯವಾಗುತ್ತದೆ. ಸರ್ವಜ್ಞ ಮತ್ತು ಸೂಕ್ಷ್ಮಗ್ರಾಹಿಯಾದ ಅಲ್ಲಾಹನ ಸ್ಥಿತಿ ಹಾಗಿಲ್ಲವಷ್ಟೆ. ಕುರ್‌ಆನ್‌ನ **2:186**ನೆಯ ವಚನದಲ್ಲಿ ಹೀಗಿದೆ:

"ಓ ಪೈಗಂಬರರೇ, ನನ್ನ ದಾಸರು ನಿಮ್ಮೊಡನೆ ನನ್ನ ಬಗ್ಗೆ ಕೇಳಿದರೆ, ನಾನು ಅವರಿಗೆ ನಿಕಟನಾಗಿದ್ದೇನೆಂದೂ, ಪ್ರಾರ್ಥಿಸುವವನು ನನ್ನನ್ನು ಪ್ರಾರ್ಥಿಸಿದಾಗ ಅವನ ಪ್ರಾರ್ಥನೆಯನ್ನು ಆಲಿಸುತ್ತೇನೆಂದೂ ಅದಕ್ಕೆ ಉತ್ತರಿಸುತ್ತೇನೆಂದೂ ಅವರಿಗೆ ಹೇಳಿರಿ. ಆದುದರಿಂದ ಅವರು ನನ್ನ ಕರೆಗೆ ಓಗೊಡಲಿ ಮತ್ತು ನನ್ನ ಮೇಲೆ ವಿಶ್ವಾಸವಿರಿಸಲಿ. (ಇದನ್ನು ಅವರಿಗೆ ತಿಳಿಸಿಬಿಡಿರಿ) ಅವರು ಸನ್ಮಾರ್ಗ ಪಡೆಯಲೂಬಹುದು." ನಮಗೆ ಅಲ್ಲಾಹನು ಅಗೋಚರನಾಗಿದ್ದರೂ ದೂರದಲ್ಲಿರುವನೆಂದು ಭಾವಿಸಬಾರದೆಂದು ಈ ವಚನವು ಸ್ಪಷ್ಟಪಡಿಸುತ್ತದೆ. ತನ್ನ ಪ್ರತಿಯೊಬ್ಬ ದಾಸನಿಗೂ ಆತನ ಸಾಮಿಪ್ಯವಿದೆ. ಆದ್ದರಿಂದ ನಮ್ಮ ಬೇಡಿಕೆಗಳನ್ನು ಸದಾ ಆತನ ಮುಂದೆ ಸಮರ್ಪಿಸಿ ಆತನೊಡನೆ ಪ್ರಾರ್ಥಿಸಬೇಕು. ಅವಾಸ್ತವಿಕ ಮತ್ತು ಅಧಿಕಾರ ರಹಿತ ವಸ್ತುಗಳನ್ನು, ಅಜ್ಞಾನದಿಂದ ದೇವರು ಮತ್ತು ಯಜಮಾನರೆಂದು ಭಾವಿಸುವುದು ಅವಿವೇಕತನವಾಗಿದೆ. ಈ ವಸ್ತುಗಳಿಗೆ ನಮ್ಮ ಪ್ರಾರ್ಥನೆಯನ್ನು ಆಲಿಸುವ ಅಥವಾ ನಮಗೆ ನೆರವಾಗುವ ಸಾಮರ್ಥ್ಯವಿಲ್ಲ. ಆದರೆ ಅನಂತ ವಿಸ್ತಾರವಾಗಿರುವ ಪ್ರಪಂಚದ ಅಧಿಪತಿ, ಸರ್ವಾಧಿಕಾರಿ ಮತ್ತು ಸರ್ವ ಶಕ್ತಿಗಳ ಒಡೆಯನಾದ ಅಲ್ಲಾಹನು ನಮ್ಮ ಸಮೀಪದಲ್ಲಿದ್ದಾನೆ. ಅವನಿಗೆ ಮಧ್ಯಸ್ಥಿಕೆದಾರನಿಲ್ಲದೆ ಸ್ವತಃ ಯಾವಾಗ ಎಲ್ಲಿ ಬೇಕಾದರೂ ನಮ್ಮ ಅಪೇಕ್ಷೆಗಳನ್ನು ಆತನ ಮುಂದೆ ಸಮರ್ಪಿಸಬಹುದು. ಆದ್ದರಿಂದ ಶಕ್ತಿ ಮತ್ತು ಅಧಿಕಾರವಿಲ್ಲದ ಕಪಟ ದೇವರ ಹಿಂದೆ ಅಲೆದಾಡುವ ಮೂರ್ಖತನವನ್ನು ತೊರೆದು ಅಲ್ಲಾಹನ ಕರೆಗೆ ಓಗೊಟ್ಟು ಆತನಲ್ಲಿ ಅಭಯ ಯಾಚಿಸಿ ಆತನೆಡೆಗೆ ಮರಳಿ ಆತನಲ್ಲಿ ವಿಶ್ವಾಸವಿರಿಸಬೇಕೆಂಬುದು ದೇವಾಜ್ಞೆಯಾಗಿದೆ.

ಈ ಕೆಳಗಿನ ವಚನಗಳನ್ನು ನೋಡಿರಿ.

"(ಆದುದರಿಂದ ಮರಳುವವರೇ) ನಿಮ್ಮ ಧರ್ಮವನ್ನು ಅಲ್ಲಾಹನಿಗಾಗಿಯೇ ಮುಡಿಪಾಗಿರಿಸಿರಿ, ಅವನನ್ನೇ ಪ್ರಾರ್ಥಿಸಿರಿ. ಇದು ಸತ್ಯನಿಷೇಧಿಗಳಿಗೆ ಎಷ್ಟು ಅಪ್ರಿಯವಾಗಿದ್ದರೂ ಸರಿಯೇ." **(ಪವಿತ್ರ ಕುರ್‌ಆನ್, 40:14)**

"ನಿಮ್ಮ ಪ್ರಭು ಹೀಗೆ ಹೇಳುತ್ತಾನೆ- ನನ್ನನ್ನು ಪ್ರಾರ್ಥಿಸಿರಿ. ನಾನು ನಿಮ್ಮ ಪ್ರಾರ್ಥನೆಗಳನ್ನು ಸ್ವೀಕರಿಸುವೆನು. ಅಹಂಕಾರಪಟ್ಟು ನನ್ನ ದಾಸ್ಯ ಮತ್ತು ಆರಾಧನೆಯಿಂದ ವಿಮುಖರಾಗುವವರು ಖಂಡಿತವಾಗಿಯೂ ಅಪಮಾನಿತರಾಗಿ ನರಕದಲ್ಲಿ ಪ್ರವೇಶಿಸುವರು."

(ಪವಿತ್ರ ಕುರ್‌ಆನ್, 40:60)

"ಅವನೇ ಚಿರಂತನನು. ಅವನ ಹೊರತು ಇನ್ನಾರೂ ಆರಾಧ್ಯರಿಲ್ಲ. ನಿಮ್ಮ ಧರ್ಮವನ್ನು ಅವನಿಗಾಗಿಯೇ ಮೀಸಲಾಗಿಟ್ಟು ಅವನನ್ನೇ ಪ್ರಾರ್ಥಿಸಿರಿ. ಸಕಲ ಪ್ರಶಂಸೆಗಳೂ ಸಕಲ ಲೋಕಗಳ ಪಾಲಕ ಪ್ರಭುವಾದ ಅಲ್ಲಾಹನಿಗೆ ಮೀಸಲು." (ಪವಿತ್ರ ಕುರ್‌ಆನ್, 40:65)

"ಭೂಮಿ-ಆಕಾಶಗಳ ಪ್ರಭುತ್ವವು ವಾಸ್ತವದಲ್ಲಿ ಅಲ್ಲಾಹನ ವಶವಿದೆ. ಬದುಕು ಸಾವುಗಳು ಅವನ ಅಧಿಕಾರದಲ್ಲಿವೆ. ಅವನಲ್ಲದೆ ನಿಮಗಾರೂ ರಕ್ಷಕ ಮಿತ್ರನಾಗಲಿ ಸಹಾಯಕನಾಗಲಿ ಇಲ್ಲ." (ಪವಿತ್ರ ಕುರ್‌ಆನ್, 9:116)

"ಅವನನ್ನು ಮಾತ್ರ ಪ್ರಾರ್ಥಿಸುವುದೇ ಸರಿ. ಅವನನ್ನು ಬಿಟ್ಟು ಇವರು ಮೊರೆಯಿಡುತ್ತಿರುವ ಇತರರು ಇವರ ಪ್ರಾರ್ಥನೆಗೆ ಯಾವ ಉತ್ತರವನ್ನೂ ಕೊಡಲಾರರು. ಅವರನ್ನು ಕೂಗಿ ಕರೆಯುವುದೆಂದರೆ- ಒಬ್ಬನು ನೀರಿದ್ದ ಕಡೆಗೆ ಕೈಗಳೆರಡನ್ನೂ ಚಾಚಿ, ನೀನು ನನ್ನ ಬಾಯಿಗೆ ಬಾ ಎಂದು ಅದರೊಡನೆ ಪ್ರಾರ್ಥಿಸಿಕೊಂಡಂತೆ. ವಸ್ತುತಃ ನೀರು (ತಾನಾಗಿ) ಅವನ ಬಳಿಗೆ ತಲುಪಲಾರದು. ಇದೇ ರೀತಿಯಲ್ಲಿ ಸತ್ಯನಿಷೇಧಿಗಳ ಪ್ರಾರ್ಥನೆಗಳೂ ಗುರಿ ಮುಟ್ಟಲಾರವು."

(ಪವಿತ್ರ ಕುರ್‌ಆನ್, 13:14)

ಉಪಕಾರ ಅಥವಾ ಉಪದ್ರವ ಮಾಡುವ ಸಾಮರ್ಥ್ಯ ಮತ್ತು ಅಧಿಕಾರ ಕೇವಲ ಅಲ್ಲಾಹನಿಗಿದೆ. ಆ ಅಧಿಕಾರದಲ್ಲಿ ಆತನು ಯಾರನ್ನೂ ಸಹಭಾಗಿಗೊಳಿಸಿಲ್ಲ. ಆತನಿಗೆ ಯಾವ ಸಹಭಾಗಿಯ ಅಗತ್ಯವೂ ಇಲ್ಲವೆಂದು ಮೇಲಿನ ಕುರ್‌ಆನ್ ವಚನವು ಸ್ಪಷ್ಟಪಡಿಸುತ್ತದೆ.

ಈ ವಚನಗಳನ್ನು ನೋಡಿರಿ:

"ಅವರು ಅಲ್ಲಾಹನನ್ನು ಬಿಟ್ಟು ಇವರಿಗೆ ನಷ್ಟವನ್ನಾಗಲಿ ಲಾಭವನ್ನಾಗಲಿ ಉಂಟು ಮಾಡದಂಥವರನ್ನು ಆರಾಧಿಸುತ್ತಾರೆ ಮತ್ತು 'ಇವರು ಅಲ್ಲಾಹನ ಬಳಿ ನಮ್ಮ ಶಿಫಾರಸು ಮಾಡುವವರು' ಎಂದು ಹೇಳುತ್ತಾರೆ. ಓ ಪೈಗಂಬರರೇ, ಇವರೊಡನೆ ಹೇಳಿರಿ, ಅಲ್ಲಾಹನು ಆಕಾಶಗಳಲ್ಲಾಗಲಿ ಭೂಮಿಯಲ್ಲಾಗಲಿ ತಿಳಿಯದಂತಹ ಸುದ್ದಿಯನ್ನು ನೀವು ಅವನಿಗೆ ತಿಳಿಸುತ್ತೀರಾ? ಇವರು ಸಹಭಾಗಿಗಳನ್ನಾಗಿ ಮಾಡುತ್ತಿರುವವುಗಳಿಂದೆಲ್ಲ ಅವನು ಅತಿ ಪಾವನನಾಗಿರುತ್ತಾನೆ." (ಪವಿತ್ರ ಕುರ್‌ಆನ್, 10:18)

"ಅಲ್ಲಾಹನನ್ನು ಬಿಟ್ಟು, ನಿಮಗೆ ಲಾಭವನ್ನಾಗಲಿ ನಷ್ಟವನ್ನಾಗಲಿ ಉಂಟು ಮಾಡಲು ಸಮರ್ಥರಲ್ಲದ ಯಾವುದೇ ಅಸ್ತಿತ್ವವನ್ನು ಪ್ರಾರ್ಥಿಸಬೇಡಿರಿ. ನೀವು ಹಾಗೆ ಮಾಡಿದರೆ ಖಂಡಿತವಾಗಿಯೂ ಅಕ್ರಮಿಗಳಲ್ಲಾಗುವಿರಿ." (ಪವಿತ್ರ ಕುರ್‌ಆನ್, 10:106)

ಅಲ್ಲಾಹನ ಹೊರತು ಪ್ರಾರ್ಥಿಸುವ ಯಾವುದೇ ವಸ್ತುವಿಗೂ ಯಾವುದೇ ಉಪಕಾರ ಅಥವಾ ಉಪದ್ರವ ಮಾಡಲು ಸಾಧ್ಯವಿಲ್ಲವೆಂದು ಒಂದು ಉಪಮೆ ಮೂಲಕ ಅಲ್ಲಾಹನು ಕುರ್‌ಆನಿನಲ್ಲಿ ವಿವರಿಸಿರುವುದನ್ನು ಗಮನಿಸಿರಿ.

"ಜನರೇ, ಒಂದು ಉದಾಹರಣೆ ಕೊಡಲಾಗುತ್ತಿದೆ. ಗಮನವಿಟ್ಟು ಕೇಳಿರಿ: ನೀವು ಅಲ್ಲಾಹನನ್ನು ಬಿಟ್ಟು ಯಾವ ಆರಾಧ್ಯರನ್ನು ಪ್ರಾರ್ಥಿಸುತ್ತೀರೋ ಅವರೆಲ್ಲರೂ ಒಟ್ಟಾಗಿ ಒಂದು ನೊಣವನ್ನೂ ಸೃಷ್ಟಿಸಲಾರರು. ಮಾತ್ರವಲ್ಲ ನೊಣವು ಅವರಿಂದೇನನ್ನಾದರೂ ಕಸಿದು ಕೊಂಡೊಯ್ದರೆ ಅವರಿಗೆ ಅದನ್ನು ಬಿಡಿಸಿಕೊಳ್ಳಲಿಕ್ಕೂ ಸಾಧ್ಯವಾಗದು. ಸಹಾಯಾರ್ಥಿಗಳೂ ದುರ್ಬಲರು, ಯಾರಿಂದ ಸಹಾಯ ಬೇಡಲಾಗುತ್ತದೋ ಅವರೂ ದುರ್ಬಲರು."

(ಪವಿತ್ರ ಕುರ್‌ಆನ್, 22:73)

ಅಲ್ಲಾಹನ ಚಟುವಟಿಕೆಗಳಿಗೆ ಮಿತಿ ನಿರ್ಣಯಿಸಲು ಅಥವಾ ಚಟುವಟಿಕೆಗಳಿಗೆ ತಡೆಯೊಡ್ಡಲು ಮಾನವರಿಗೆ ಸಾಧ್ಯವಿಲ್ಲವೆಂದು ಈ ಕೆಳಗಿನ ವಚನ ಸ್ಪಷ್ಟಪಡಿಸುತ್ತದೆ.

"ಅಲ್ಲಾಹನು ನಿಮ್ಮನ್ನು ಯಾವುದಾದರೂ ಕಷ್ಟಕ್ಕೆ ಗುರಿಪಡಿಸಿದರೆ, ಸ್ವತಃ ಅವನ ಹೊರತು ಆ ಕಷ್ಟವನ್ನು ದೂರೀಕರಿಸುವವನು ಇನ್ನಾರೂ ಇಲ್ಲ ಮತ್ತು ಅವನು ನಿಮಗೆ ಹಿತವನ್ನು ಬಯಸಿದರೆ ಅವನ ಅನುಗ್ರಹವನ್ನು ತಡೆಯುವವನೂ ಯಾರೂ ಇಲ್ಲ. ಅವನು ತನ್ನ ದಾಸರ ಪೈಕಿ ತನಗಿಷ್ಟ ಬಂದವರಿಗೆ ತನ್ನ ಅನುಗ್ರಹ ಪ್ರಧಾನ ಮಾಡುತ್ತಾನೆ. ಅವನು ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 10:107)

ಮೇಲೆ ಉದ್ಧರಿಸಿರುವ ಎಲ್ಲ ವಚನಗಳಲ್ಲಿಯೂ ಪ್ರಾರ್ಥನೆಗೆ ಕೇವಲ ಅಲ್ಲಾಹನೇ ಅರ್ಹನು, ಇತರ ಯಾರೊಡನೆಯೂ ಸಹಾಯ ಯಾಚಿಸಬಾರದೆಂದು ಸ್ಪಷ್ಟವಾಗುತ್ತದೆ.

## ಮನಃಶಾಂತಿಯ ಮಾರ್ಗಗಳು

ನಾವು ಏನನ್ನು ಪ್ರಾರ್ಥಿಸಬೇಕೆಂದು ಕುರ್‌ಆನಿನ ಅನೇಕ ಕಡೆಗಳಲ್ಲಿ ವಿವರಿಸಲಾಗಿದೆ. ಅದರಲ್ಲಿ ಕೆಲವು ಪ್ರಧಾನ ಪ್ರಾರ್ಥನೆಗಳನ್ನು ಇಲ್ಲಿ ಉದ್ಧರಿಸಲಾಗಿದೆ.

ಕುರ್‌ಆನಿನ ಅತಿ ಪ್ರಧಾನ ಅಧ್ಯಾಯವಾಗಿರುವ ಸೂರಃ ಫಾತಿಹದಲ್ಲಿ ಹೀಗೆ ಹೇಳಲಾಗಿದೆ:

"ನಮಗೆ ಸನ್ಮಾರ್ಗವನ್ನು ತೋರಿಸು." (ಪವಿತ್ರ ಕುರ್‌ಆನ್, 1:6)

ಈ ಲೋಕದಲ್ಲಿ ಸತ್ಕರ್ಮವನ್ನು ಮಾಡುವ ದುಷ್ಕರ್ಮವನ್ನು ತೊರೆಯುವ ಮನೋಸ್ಥೈರ್ಯವನ್ನು ನೀಡೆಂಬ ಪ್ರಾರ್ಥನೆಯೂ ಇದರಲ್ಲಿ ಸೇರಿದೆ.

ಆಲಿ ಇಮ್ರಾನ್ ಅಧ್ಯಾಯದಲ್ಲಿ ಪಾಂಡಿತ್ಯದಲ್ಲಿ ಸುದೃಢವಾಗಿರುವ ವಿದ್ವಾಂಸರ ಪ್ರಾರ್ಥನೆಯ ಒಂದು ರೂಪವನ್ನೂ ವಿವರಿಸಲಾಗಿದೆ.

"ಓ ನಮ್ಮ ಪ್ರಭೂ, ನೀನು ನಮ್ಮನ್ನು ನೇರಮಾರ್ಗದಲ್ಲಿ ಹಾಕಿರುತ್ತ ಪುನಃ ನಮ್ಮ ಮನಸ್ಸುಗಳನ್ನು ದೋಷಗಳಲ್ಲಿ ಸಿಲುಕಿಸಿಬಿಡಬೇಡ. ನೀನು ನಿನ್ನ ಅನುಗ್ರಹ ಭಂಡಾರದಿಂದ ಕೃಪೆಯನ್ನು ನೀಡು. ನೀನೇ ನೈಜ ಮಹಾದಾನಿಯಾಗಿರುತ್ತೀ." (ಪವಿತ್ರ ಕುರ್‌ಆನ್, 3:8)

ಸನ್ಮಾರ್ಗವನ್ನು ಅವಲಂಬಿಸುವ ಜನರೂ ಕೆಲವೊಮ್ಮೆ ಪಿಶಾಚಿಯ ದುಷ್ಪ್ರೇರಣೆಯಿಂದ ದಾರಿ ತಪ್ಪುವ ಸಾಧ್ಯತೆ ಇದೆ. ಅಂತಹ ಸ್ಥಿತಿಗೆ ಅವಕಾಶ ನೀಡಬಾರದು, ಅಲ್ಲಾಹನ ಅನುಗ್ರಹವು ಸದಾ ಇರಬೇಕೆಂಬುದೇ ಈ ಪ್ರಾರ್ಥನೆಯ ಉದ್ದೇಶವಾಗಿದೆ. ಈ ಪ್ರಪಂಚದಲ್ಲಿ

ದುರ್ಮಾರ್ಗ ಮತ್ತು ವಾಮಸಂಚಾರದ ಸಾಧ್ಯತೆಗಳು ಧಾರಾಳವಾಗಿವೆ. ಈ ಸಾಧ್ಯತೆಯಿಂದ ದೂರವುಳಿಯುವ ಮನೋಸ್ಥೈರ್ಯಕ್ಕಾಗಿ ಪೂರ್ವಕಾಲಗಳಲ್ಲಿ ಅನೇಕ ಜನರು ಅಗ್ನಿ ಪರೀಕ್ಷೆಗಳನ್ನು ಎದುರಿಸಿದ್ದಾರೆ. ಪ್ರವಾದಿಯವರ ಜತೆಯಲ್ಲಿದ್ದ ಅನೇಕ ಇತಿಹಾಸ ಪುರುಷರಿಗೂ ಕೆಡುಕನ್ನು ವಿರೋಧಿಸಲಿಕ್ಕಾಗಿ ಯುದ್ಧ ಮಾಡಬೇಕಾಯಿತು. ಸಂಕಷ್ಟಗಳನ್ನು ಅನುಭವಿಸ ಬೇಕಾಯಿತು. ಆದರೆ ಆ ಪರಿಸ್ಥಿತಿಯು ಅವರ ಮನೋಸ್ಥೈರ್ಯವನ್ನು ಕೆಡಿಸಲಿಲ್ಲ. ಅವರನ್ನು ದುರ್ಬಲಗೊಳಿಸಲಿಲ್ಲವೆಂದು ವಿವರಿಸಿದ ಬಳಿಕ ಅವರ ಪ್ರಾರ್ಥನೆ ಹೇಗಿತ್ತೆಂದು ಆಲಿ ಇಮ್ರಾನ್‌ನ ಇನ್ನೊಂದು ವಚನದಲ್ಲಿ ವಿವರಿಸಲಾಗಿದೆ.

ಅವರ ಪ್ರಾರ್ಥನೆ ಹೀಗಿತ್ತು: **"ಓ ನಮ್ಮ ಪ್ರಭೂ, ನಮ್ಮ ಅಪರಾಧಗಳನ್ನೂ ಲೋಪದೋಷಗಳನ್ನೂ ಕ್ಷಮಿಸು. ನಮ್ಮ ಕೆಲಸ ಕಾರ್ಯಗಳಲ್ಲಿ ಸಂಭವಿಸಿ ಬಿಟ್ಟ ಅತಿಕ್ರಮ ಗಳನ್ನು ಕ್ಷಮಿಸು. ನಮ್ಮ ಪಾದಗಳನ್ನು ಸ್ಥಿರಗೊಳಿಸು ಮತ್ತು ಸತ್ಯನಿಷೇಧಿಗಳ ಎದುರು ನಮಗೆ ಸಹಾಯ ಮಾಡು." (ಪವಿತ್ರ ಕುರ್‌ಆನ್, 3:147)**

ಅಲ್ಲಾಹನ ದಾಸರ ವೈಶಿಷ್ಟ್ಯಗಳನ್ನು ವಿವರಿಸುತ್ತಾ ಅವರ ಪ್ರಾರ್ಥನೆ ಹೇಗಿರಬೇಕೆಂದು ಅಲ್‌ಫುರ್ಕಾನ್‌ನಲ್ಲಿ ಹೀಗೆ ತಿಳಿಸಲಾಗಿದೆ:

**"ಅವರು ಹೀಗೆ ಪ್ರಾರ್ಥಿಸುತ್ತಾರೆ, ನಮ್ಮ ಪ್ರಭೂ, ನಮ್ಮನ್ನು ನರಕದ ಯಾತನೆ ಯಿಂದ ರಕ್ಷಿಸು. ಅದರ ಯಾತನೆಯಂತೂ ಪ್ರಾಣಾಂತಿಕವಾಗಿದೆ. ಅದು ಅತ್ಯಂತ ನಿಕೃಷ್ಟ ನೆಲೆ ಮತ್ತು ಸ್ಥಾನವಾಗಿರುತ್ತದೆ." (ಪವಿತ್ರ ಕುರ್‌ಆನ್, 25:65-66)**

ನರಕದಿಂದ ಓರ್ವನು ಪಾರಾಗಬೇಕಾದರೆ ಆತನು ನಿಷ್ಕಳಂಕ ಜೀವನ ಸಾಗಿಸ ಬೇಕಾಗಿದೆಯಷ್ಟೆ. ಆ ಉತ್ತಮ ಜೀವನ ಸಾಗಿಸುವ ಅನುಗ್ರಹವನ್ನೂ ದಯಪಾಲಿಸ ಬೇಕೆಂಬುದೂ ಈ ಪ್ರಾರ್ಥನೆಯ ಉದ್ದೇಶವಾಗಿದೆ. ಅವರ ಇನ್ನೊಂದು ಪ್ರಾರ್ಥನೆ ಹೀಗಿದೆ:

**"ನಮ್ಮ ಪ್ರಭೂ, ನಮ್ಮ ಪತ್ನಿಯರಿಂದಲೂ ಮಕ್ಕಳಿಂದಲೂ ನಮ್ಮ ಕಣ್ಮನಗಳನ್ನು ತಣಿಸು ಮತ್ತು ನಮ್ಮನ್ನು ಧರ್ಮನಿಷ್ಠರ ನಾಯಕರಾಗಿ ಮಾಡು ಎಂದು ಪ್ರಾರ್ಥಿಸುತ್ತಾರೆ." (ಪವಿತ್ರ ಕುರ್‌ಆನ್, 25:74)**

ಇಲ್ಲಿ ಕಣ್ತಣಿಸುವ ಮಡದಿ ಮಕ್ಕಳೆಂಬುದರ ಇಂಗಿತವು ಕೇವಲ ಬಾಹ್ಯ ಸೌಂದರ್ಯವಲ್ಲ. ಅವರು ಸದ್ಗುಣ ಸಂಪನ್ನರು ಮತ್ತು ದೇವ ಭಕ್ತರಾಗಿರಬೇಕೆಂದರ್ಥ. ರೂಪಲಾವಣ್ಯ ಕಡಿಮೆಯಿದ್ದರೂ ಸದ್ಗುಣ ಸಂಪನ್ನ ಮಕ್ಕಳು ನಮ್ಮನ್ನು ಸಂತುಷ್ಟ ಗೊಳಿಸುತ್ತಾರೆ. ಅವಿಧೇಯತೆ ತೋರಿಸುವ ಮಕ್ಕಳು ಸುಂದರರಾಗಿ ಏನು ಪ್ರಯೋಜನ? ಇತರೆಡೆಗಳಲ್ಲಿಯೂ ಪ್ರಾರ್ಥನೆಯ ರೂಪವನ್ನು ವಿವರಿಸಲಾಗಿದೆ.

**"ನಾವು ಆಜ್ಞೆಯನ್ನು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು. ನಮ್ಮ ಪ್ರಭೂ, ನಾವು ನಿನ್ನಿಂದ ಪಾಪವಿಮೋಚನೆಯನ್ನು ಬಯಸುತ್ತೇವೆ ಮತ್ತು ನಮಗೆ ನಿನ್ನ ಕಡೆಗೇ ಮರಳಲಿಕ್ಕಿದೆ ಎಂದು ಅವರನ್ನುತ್ತಾರೆ." (ಪವಿತ್ರ ಕುರ್‌ಆನ್, 2:285)**

ಅಲ್ಲಾಹನು ಯಾವ ಜೀವಿಯ ಮೇಲೆಯೂ ಅವನ ಶಕ್ತಿಗೆ ಮೀರಿದ ಹೊಣೆ ಹೊರಿಸು ವುದಿಲ್ಲ. ಪ್ರತಿಯೊಬ್ಬನು ಗಳಿಸಿದ ಪುಣ್ಯದ ಫಲ ಅವನಿಗೆ ಸಿಗುವುದು ಮತ್ತು ಅವನು

ಶೇಖರಿಸಿದ ಪಾಪದ ದಂಡವೂ ಅವನ ಮೇಲೆಯೇ ಇರುವುದು. "(ಓ ಸತ್ಯ ವಿಶ್ವಾಸಿಗಳೇ! ನೀವು ಹೀಗೆ ಯಾಚಿಸಿರಿ:) ಓ ನಮ್ಮ ಪ್ರಭೂ, ನಮ್ಮಿಂದ ಪ್ರಮಾದವಶಾತ್ ಅಪರಾಧಗಳಾಗಿ ಬಿಟ್ಟರೆ ಅವುಗಳಿಗಾಗಿ ನಮ್ಮನ್ನು ಹಿಡಿಯಬೇಡ. ಪ್ರಭೂ, ನಮ್ಮ ಪೂರ್ವಿಕರ ಮೇಲೆ ಹೊರಿಸಿದಂತಹ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ಓ ನಮ್ಮ ಪ್ರಭೂ, ನಮ್ಮಿಂದ ಹೊರಲು ಸಾಧ್ಯವಾಗದ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ನಮ್ಮ ಪಾಪಗಳನ್ನು ಪರಿಹರಿಸು, ನಮ್ಮನ್ನು ಕ್ಷಮಿಸು, ನಮ್ಮ ಮೇಲೆ ಕೃಪೆದೋರು. ನೀನೇ ನಮ್ಮ ಒಡೆಯ. ಸತ್ಯನಿಷೇಧಿಗಳ ಎದುರು ನಮಗೆ ಸಹಾಯ ಮಾಡು." (ಪವಿತ್ರ ಕುರ್‌ಆನ್, 2:286)

ಪ್ರಸ್ತುತ ಎರಡು ವಚನಗಳು ಸತ್ಯವಿಶ್ವಾಸಿಯ ಪ್ರಾರ್ಥನೆ ಹೇಗಿರಬೇಕೆಂದು ಸೂಚಿಸುತ್ತವೆ:

"ಅವರು ಎದ್ದಾಗಲೂ ಕುಳಿತಾಗಲೂ ಮಲಗಿದಾಗಲೂ ಎಲ್ಲ ಸ್ಥಿತಿಗಳಲ್ಲೂ ಅಲ್ಲಾಹನನ್ನು ಸ್ಮರಿಸುತ್ತಾರೆ ಮತ್ತು ಭೂಮಿ-ಆಕಾಶಗಳ ನಿರ್ಮಾಣದ ಬಗ್ಗೆ ಪರ್ಯಾಲೋಚಿಸುತ್ತಾರೆ. (ಅವರು ಪರವಶರಾಗಿ ಹೀಗೆನ್ನುತ್ತಾರೆ) ಪ್ರಭೂ, ನೀನು ಇವುಗಳನ್ನೆಲ್ಲ ವ್ಯರ್ಥ ಹಾಗೂ ಉದ್ದೇಶರಹಿತವಾಗಿ ಸೃಷ್ಟಿಸಲಿಲ್ಲ. ನೀನು (ನಿರರ್ಥಕ ಕಾರ್ಯಗಳನ್ನೆಸಗುವುದರಿಂದ) ಪರಿಶುದ್ಧನು. ಆದುದರಿಂದ ಓ ನಮ್ಮ ಪ್ರಭೂ, ನಮ್ಮನ್ನು ನರಕಾಗ್ನಿಯಿಂದ ರಕ್ಷಿಸು."

(ಪವಿತ್ರ ಕುರ್‌ಆನ್, 3:191)

"ನೀನು ಯಾರನ್ನು ನರಕದಲ್ಲಿ ಹಾಕಿದೆಯೋ ಅವನನ್ನು ಅತಿ ಅಪಮಾನಕಾರಕ ದುರ್ಗತಿಯಲ್ಲಿ ಹಾಕಿದೆ. ಇಂತಹ ಅಕ್ರಮಿಗಳಿಗೆ ಯಾರೂ ಸಹಾಯಕರಿರಲಾರರು. "

(ಪವಿತ್ರ ಕುರ್‌ಆನ್, 3:192)

"ಓ ನಮ್ಮ ಪ್ರಭೂ, ನಾವು ಸತ್ಯವಿಶ್ವಾಸದ ಕಡೆಗೆ ಆಹ್ವಾನಿಸುತ್ತಿದ್ದ ಮತ್ತು ನಿಮ್ಮ ಪ್ರಭುವನ್ನು ನಂಬಿರೆಂದು ಹೇಳುತ್ತಿದ್ದ ಓರ್ವ ಕರೆ ಕೊಡುವಾತನನ್ನು ಆಲಿಸಿದೆವು. ನಾವು ಅವನ ಆಹ್ವಾನವನ್ನು ಸ್ವೀಕರಿಸಿದೆವು. ಆದುದರಿಂದ ಓ ನಮ್ಮೊಡೆಯಾ, ನಮ್ಮಿಂದ ಸಂಭವಿಸಿ ಹೋಗಿದ್ದ ಅಪರಾಧಗಳನ್ನು ಕ್ಷಮಿಸು. ನಮ್ಮಲ್ಲಿರುವ ಕೆಡುಕುಗಳನ್ನು ದೂರೀಕರಿಸು ಮತ್ತು ನಮ್ಮ ಅವಸಾನವನ್ನು ಸಜ್ಜನರೊಂದಿಗೆ ಮಾಡು." (ಪವಿತ್ರ ಕುರ್‌ಆನ್, 3:193)

"ಓ ನಮ್ಮ ಪ್ರಭೂ, ನೀನು ನಿನ್ನ ಸಂದೇಶವಾಹಕರ ಮೂಲಕ ಮಾಡಿರುವ ವಾಗ್ದಾನಗಳನ್ನು ನಮಗೆ ನೆರವೇರಿಸಿಕೊಡು ಮತ್ತು ಪುನರುತ್ಥಾನ ದಿನದಂದು ನಮ್ಮನ್ನು ಅವಮಾನಕ್ಕೊಳಪಡಿಸಬೇಡ. ನಿಶ್ಚಯವಾಗಿಯೂ ನೀನು ನಿನ್ನ ವಾಗ್ದಾನಕ್ಕೆ ವ್ಯತಿರಿಕ್ತವಾಗಿ ನಡೆಯುವವನಲ್ಲ."

(ಪವಿತ್ರ ಕುರ್‌ಆನ್, 3:194)

ಮೇಲೆ ಉದ್ಧರಿಸಿರುವ ಯಾವುದೇ ವಚನದಲ್ಲಿ ಇಹಲೋಕದ ಸುಖ ಸೌಲಭ್ಯಗಳಿಗಾಗಿ ಪ್ರಾರ್ಥಿಸಿರುವುದು ನಮಗೆ ಕಾಣಿಸುವುದಿಲ್ಲ. ನಮ್ಮ ಪಾಪಗಳನ್ನು ಮನ್ನಿಸು, ಸನ್ಮಾರ್ಗದಲ್ಲಿ ಮುನ್ನಡೆಸು, ನರಕ ಶಿಕ್ಷೆಯಿಂದ ರಕ್ಷಿಸು ಎಂದು ಮುಂತಾಗಿ ಮಾತ್ರ ಪ್ರಾರ್ಥಿಸಲಾಗಿದೆ. ಈ ಎಲ್ಲ ಅಂಶಗಳೂ ಕೆಳಗೆ ಸೂಚಿಸಲಾಗಿರುವ ವಚನದಲ್ಲಿ ಪುನಃ ಸ್ಪಷ್ಟಪಡಿಸಲಾಗಿದೆ.

"ಹೀಗೆ ನೀವು ಹಜ್ಜ್‌ನ ವಿಧಿ ವಿಧಾನಗಳನ್ನು ನಿರ್ವಹಿಸಿದ ಬಳಿಕ, ಹಿಂದೆ ನೀವು ಪೂರ್ವಿಕರನ್ನು ಸ್ಮರಿಸುತ್ತಿದ್ದಂತೆಯೇ ಅಲ್ಲಾಹನನ್ನು ಸ್ಮರಿಸಿರಿ; ಮಾತ್ರವಲ್ಲ ಅದಕ್ಕಿಂತಲೂ ಅಧಿಕವಾಗಿ ಸ್ಮರಿಸಿರಿ. (ಆದರೆ, ಅಲ್ಲಾಹನನ್ನು ಸ್ಮರಿಸುವವರಲ್ಲೂ ತುಂಬಾ ತಾರತಮ್ಯವಿದೆ.) ಅವರಲ್ಲಿ ಕೆಲವರು, 'ಓ ನಮ್ಮ ಪ್ರಭೂ, ನಮಗೆ ಇಹಲೋಕದಲ್ಲೇ ಎಲ್ಲವನ್ನೂ ಕೊಟ್ಟುಬಿಡು' ಎನ್ನುವವರಿದ್ದಾರೆ. ಇಂತಹವರಿಗೆ ಪರಲೋಕದಲ್ಲಿ ಯಾವ ಪಾಲೂ ಇಲ್ಲ. ಇನ್ನು ಕೆಲವರು, 'ಓ ನಮ್ಮ ಪ್ರಭೂ, ನಮಗೆ ಇಹಲೋಕದಲ್ಲಿಯೂ ಒಳಿತನ್ನು ದಯಪಾಲಿಸು ಪರಲೋಕ ದಲ್ಲಿಯೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ಅಗ್ನಿಯಾತನೆಯಿಂದ ರಕ್ಷಿಸು' ಎನ್ನುವವರೂ ಇದ್ದಾರೆ. ಇಂತಹವರು ತಮ್ಮ ದುಡಿಮೆಗನುಸಾರವಾಗಿ (ಇಕ್ಕಡೆಗಳಲ್ಲೂ) ಪಾಲು ಪಡೆಯುವರು. ಅಲ್ಲಾಹನು ಲೆಕ್ಕ ತೀರಿಸುವುದರಲ್ಲಿ ಅತಿ ಶೀಘ್ರನಾಗಿರುತ್ತಾನೆ."

**(ಪವಿತ್ರ ಕುರ್‌ಆನ್, 2:200-202)**

ನಮ್ಮ ಪ್ರಾರ್ಥನೆಯ ಗುರಿಯು ಕೇವಲ ಇಹಲೋಕದ ಸುಖಸೌಲಭ್ಯಗಳಾಗಿರಬಾರದು. ಈ ಕೆಳಗಿನ ಘಟನೆಯು ಅದಕ್ಕೆ ಪ್ರಬಲ ಪುರಾವೆಯಾಗಿದೆ.

ಒಮ್ಮೆ ಬಳಲಿ ವಿವಶರಾದ ಓರ್ವರು ಇಮಾಮ್ ಜಅಫರುಸ್ಸಾದಿಕ್‌ರ ಬಳಿ ಬಂದು ಹೀಗೆ ಹೇಳಿದರು: "ನಾನು ಅನಾಥ ಮತ್ತು ಬಡವ. ಆದ್ದರಿಂದ ಕರುಣಾನಿಧಿಯಾದ ಅಲ್ಲಾಹನೊಡನೆ ನನಗಾಗಿ ಪ್ರಾರ್ಥಿಸಿರಿ. ನನ್ನ ಬಡತನ ಮತ್ತು ದುಃಖವು ನಿವಾರಣೆಯಾಗಿ ನನಗೆ ಸಂಪತ್ತು ಮತ್ತು ಸೌಭಾಗ್ಯ ಹೆಚ್ಚಲಿಕ್ಕಾಗಿ ಪ್ರಾರ್ಥಿಸಿರಿ. ಆಗಂತುಕನು ಉತ್ತಮ ಆರೋಗ್ಯವಂತನಾಗಿರುವುದನ್ನು ಮನಗಂಡ ಇಮಾಮರು ಆತನ ಬೇಡಿಕೆಯನ್ನು ಕಟು ಶಬ್ದಗಳಿಂದ ತಿರಸ್ಕರಿಸುತ್ತಾ ಈ ವಿಷಯದಲ್ಲಿ ನಾನು ಪ್ರಾರ್ಥಿಸುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿದರು. ಬಡವರ ಬಗ್ಗೆ ಸಹಾನುಭೂತಿ ಹೊಂದಿರುವ ಇಮಾಮರು ಯಾಕೆ ಹೀಗೆ ಹೇಳಿದರೆಂದು ಆತನಿಗೆ ಸಂಶಯವಾಯಿತು. ಆ ಸಂಶಯಕ್ಕೆ ಇಮಾಮರ ಉತ್ತರ ಹೀಗಿತ್ತು: "ದೇವನು ಪ್ರತಿಯೊಬ್ಬ ಮಾನವನಿಗೂ ಪ್ರತಿಯೊಂದು ವಿಷಯದಲ್ಲಿಯೂ ಒಂದೊಂದು ಕಾರ್ಯ ವಿಧಾನವನ್ನು ನೀಡಿದ್ದಾನೆ. ತನ್ನ ಉಳಿವಿಗಾಗಿ ಆತನಿಗೆ ಗಟ್ಟಿ ಮುಟ್ಟಾದ ದೇಹಾಂಗಗಳನ್ನೂ ಆಲೋಚಿಸುವ ಮೆದುಳನ್ನೂ ದಯಪಾಲಿಸಿದ್ದಾನೆ. ಅವುಗಳನ್ನು ಬಳಸದೆ ಸೋಮಾರಿಯಾಗಿ ಕುಳಿತು ಪ್ರಾರ್ಥನೆಯಿಂದ ಕಾರ್ಯ ಸಾಧಿಸ ಬಹುದೆಂದು ನೀವು ಆಸೆಪಡುತ್ತೀರಿ. ಅದು ಸರಿಯಲ್ಲ, ದೇವ ಮಾರ್ಗವೂ ಅಲ್ಲ. ಹೋಗಿ ದುಡಿದು ಮಾನವನಾಗಿ ಬಾಳಿರಿ."

ಹಿಂದೆ ಉದ್ಧರಿಸಿರುವ ಕುರ್‌ಆನ್ ವಚನದಲ್ಲಿ ಇಹಪರ ಒಳಿತಿಗಾಗಿ ಪ್ರಾರ್ಥಿಸ ಬೇಕೆಂದು ನಮಗೆ ಆದೇಶಿಸಲಾಗಿದೆ. ಯಾವುದು ಒಳಿತು? ಈ ಕೆಳಗಿನ ಉದಾಹರಣೆಯಿಂದ ನಾವು ಒಳಿತಿನ ನೈಜ ರೂಪವನ್ನು ಗ್ರಹಿಸಬಹುದಾಗಿದೆ.

ನಿಮಗೆ ವಿವಾಹ ಪ್ರಾಯದ ಓರ್ವ ಮಗಳಿದ್ದಾಳೆ. ನೀವು ಆಕೆಗೆ ವರನನ್ನು ಹುಡುಕುತ್ತಿರುವಿರೆಂದು ಭಾವಿಸೋಣ. ಹೇಗಾದರೂ ನಿಮ್ಮ ಮಗಳ ವಿವಾಹ ಆಗಿ ಬಿಟ್ಟರೆ

ಸಾಕು, ನಿರ್ದಿಷ್ಟ ವರನಿಂದ ಸಕಾರಾತ್ಮಕ ಉತ್ತರ ಆದಷ್ಟು ಬೇಗನೆ ದೊರೆಯಲಿ ಎಂದು ಪ್ರಾರ್ಥಿಸಿದರೆ ಅದು ಸರಿಯಾದ ಪ್ರಾರ್ಥನೆಯಾಗುವುದಿಲ್ಲ. ಇಲ್ಲಿ ನೀವು ಸಂಪೂರ್ಣವಾಗಿ ಇಹಲೋಕದ ಕಾರ್ಯ ಸಾಧನೆಗೆ ಒತ್ತು ನೀಡುತ್ತಿರುವಿರಿ. ಮಗಳ ವಿವಾಹವು ಹೇಗಾದರೂ ಆಗಿ ಬಿಟ್ಟರೆ ಸಾಕೇ?

ವಿವಾಹ ಮುಗಿದು ನೀವು ದೊಡ್ಡ ಸಾಲಗಾರನಾಗಿ ಬಿಟ್ಟರೆ? ಪತಿ ಪತ್ನಿಯರಲ್ಲಿ ಪರಸ್ಪರ ಸಾಮರಸ್ಯವಿಲ್ಲದಿದ್ದರೆ? ಪತಿಯ ಮನೆಯವರೊಂದಿಗೆ ಜಗಳಾಡುವ ದುರ್ಗತಿ ಬಂದರೆ? ನಿಮಗೆ ಹೀಗೆಲ್ಲ ಸಂಭವಿಸಿ ಬಿಡುವ ಸಾಧ್ಯತೆಯಿದ್ದರೂ ನೀವು ಪ್ರಾರ್ಥನೆಯಲ್ಲಿ ಅವೆಲ್ಲವನ್ನೂ ಮರೆತು ಬಿಡುತ್ತೀರಿ. ಅದರ ಬದಲಾಗಿ ನೀವು ಹೀಗೆ ಪ್ರಾರ್ಥಿಸಬೇಕು. "ನನ್ನ ಪ್ರಭೂ! ನಾನು ನನ್ನ ಮಗಳಿಗಾಗಿ ವಿಚಾರಿಸಿರುವ ವರನು ಉತ್ತಮನಾಗಿದ್ದರೆ- ನನ್ನ ಮಗಳಿಗೆ ಯೋಗ್ಯನಾಗಿದ್ದರೆ- ಅವರಿಂದ ನನಗೆ ಒಪ್ಪಿಗೆಯ ಉತ್ತರ ದೊರೆಯಲಿ. ಯಾವುದಾದರೂ ರೀತಿಯಲ್ಲಿ ಅವರಿಂದ ನಕಾರಾತ್ಮಕ ಉತ್ತರ ದೊರೆತರೆ ಅದರಿಂದ ತನಗೆ ಒಳಿತಿದೆಯೆಂದು ಭಾವಿಸಿ ಸಮಾಧಾನ ಪಟ್ಟು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು. ಒಂದು ವೇಳೆ ಒಪ್ಪಿಗೆಯ ಉತ್ತರ ದೊರೆತರೆ ಮೊದಲು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿ ವಿವಾಹವು ಎಲ್ಲ ದೃಷ್ಟಿಯಿಂದಲೂ ಉತ್ತಮ ರೀತಿಯಲ್ಲಿ ಮುಗಿದು ಆ ಬಳಿಕ ಪತಿಪತ್ನಿಯರೂ ಕುಟುಂಬವೂ ಸುಖಸಂತೋಷದಿಂದ ಬಾಳಲು ನೆರವಾಗುವಂತೆ ಪ್ರಾರ್ಥಿಸಬೇಕು. ಹಿಂದೆ ಉದ್ಧರಿಸಿದ ಕುರ್‌ಆನ್ ವಚನದಲ್ಲಿ ಈ ಲೋಕದ ಒಳಿತೆಂದರೆ ಮನಃಶಾಂತಿಯ ಜೀವನವಾಗಿದೆ. ಈ ಜಗತ್ತಿನಲ್ಲಿ ನಮಗೆ ಶಾಂತಿಪೂರ್ಣ ಜೀವನ ಹೇಗೆ ದೊರೆಯುವುದೆಂಬುದನ್ನು ಮುಂದೆ ಪರಿಶೀಲಿಸೋಣ.

# ಹಣ, ಖ್ಯಾತಿ, ನೆಮ್ಮದಿ

ಹಣವಿಲ್ಲದೆ ಕಷ್ಟಪಡುವ ಜನರು ಹಣವೇ ಎಲ್ಲ ವಿಷಯಗಳ ಮೂಲ ಬಂಡವಾಳ ವೆಂದು ಭಾವಿಸುತ್ತಾರೆ. ನೆಮ್ಮದಿಯನ್ನು ಹಣದಿಂದ ಖರೀದಿಸಬಹುದೆಂದು ಅವರ ಅಂದಾಜು. ಇದು ನಿಜವೋ?

ಅಬೂಹುರೈರಾ ವರದಿ ಮಾಡಿದ ಒಂದು ಹದೀಸ್‌ನಲ್ಲಿ ಹೀಗಿದೆ:

"ಶ್ರೀಮಂತಿಕೆಯು ಸಂಪತ್ಸಮೃದ್ಧಿಯಿಂದಲ್ಲ, ಮನಸ್ಸಿನ ಶ್ರೀಮಂತಿಕೆಯಿಂದಾಗುತ್ತದೆ."

(ಬುಖಾರಿ)

ಒಮ್ಮೆ ಪ್ರವಾದಿಯವರೇ ಹೀಗೆ ಹೇಳಿದ್ದರು: "ನಾನು ಕಡುಬಡತನಕ್ಕಿಂತ ಹೆಚ್ಚಾಗಿ ಸಂಪತ್ತಿಗೆ ಹೆದರುತ್ತೇನೆ." ಇದು ತೀರಾ ವಾಸ್ತವಿಕವೆಂದು ನಮ್ಮ ಪರಿಸರಗಳನ್ನು ವೀಕ್ಷಿಸಿದರೆ ವ್ಯಕ್ತವಾಗುತ್ತದೆ. ಅನೇಕ ಎಸ್ಟೇಟ್‌ಗಳು, ದೊಡ್ಡ ಕಂಪೆನಿಗಳಲ್ಲಿ ಶೇರು, ಅತ್ಯಧಿಕ ಬಾಡಿಗೆ ದೊರೆಯುವ ಕಟ್ಟಡಗಳು, ಉತ್ತಮ ಸ್ಥಿತಿಯಲ್ಲಿ ನಡೆಯುತ್ತಿರುವ ವ್ಯಾಪಾರ ಇತ್ಯಾದಿ ಗಳಿದ್ದರೂ ಹವಾನಿಯಂತ್ರಿತ ಕಟ್ಟಡದಲ್ಲಿ ಮಲಗಿಯೂ ನಿದ್ರೆ ಬರುವುದಿಲ್ಲ. ಅವರಿಗೆ 24 ಗಂಟೆಯೂ ಕಳವಳ. ಖಿನ್ನತೆಯಿಂದಾಗಿ ರಾತ್ರಿ ನಿದ್ರೆ ಇಲ್ಲ. ನಿದ್ದೆಯಿಂದ ಧಿಗ್ಗನೆ ಎಚ್ಚರ ವಾಗುತ್ತದೆ. ನೆಮ್ಮದಿಗಾಗಿ ಮದ್ಯಪಾನ ಮಾಡುತ್ತಾರೆ. ಹೀಗೆ ಮದ್ಯಪಾನವು ಅವರನ್ನು ದೈಹಿಕವಾಗಿಯೂ ಮಾನಸಿಕವಾಗಿಯೂ ಆರ್ಥಿಕವಾಗಿಯೂ ನಾಶಪಡಿಸುತ್ತದೆ. ಮದ್ಯಪಾನ ಹೆಚ್ಚಿದಂತೆ ಇತರ ರೋಗಗಳೂ ಸೇರಿಕೊಳ್ಳುತ್ತವೆ. ಇದು ಅವರ ಅವಸ್ಥೆ.

ಅಮೇರಿಕದ ಅತಿ ಶ್ರೀಮಂತನಾದ ಬಾರ್ಬರಾ ಹಟ್ಟನ್‌ರ ಕಥೆ ಕೇಳಿರಿ. ಬಾರ್ಬರ ಏಳು ಬಾರಿ ವಿವಾಹವಾದ ಶ್ರೀಮಂತ ಮಹಿಳೆಯಾಗಿದ್ದಳು. ಆದರೆ, ಆಕೆಯ ಶವ ಸಂಸ್ಕಾರಕ್ಕೆ ಕೇವಲ ಹತ್ತು ಮಿತ್ರರು ಸೇರಿದ್ದರು. ನಿಧನಕ್ಕಿಂತ ಮುಂಚೆ ಸುದೀರ್ಘ ಕಾಲ ರೋಗಶಯ್ಯೆಯಲ್ಲಿದ್ದಳು. ಒಂದೊಮ್ಮೆ ಅಮೂಲ್ಯ ರತ್ನಗಳನ್ನು ಧರಿಸಿ ಅಮೇರಿಕದದಲ್ಲಿ ಉಲ್ಲಾಸವಾಗಿ ಮೆರೆದಿದ್ದ ಬಾರ್ಬರ ಮರಣಶಯ್ಯೆಯಲ್ಲಿದ್ದಾಗ ಯಾರೂ ಆಕೆಯತ್ತ ತಿರುಗಿ ಸಹ ನೋಡಲಿಲ್ಲ. ಪ್ರಖ್ಯಾತ ಎಫ್.ಡಬ್ಲ್ಯೂ. ವುಡ್‌ವರ್ತ್ ನಿಧನರಾದಾಗ ಪುಟ್ಟ ಮಗಳು ಬಾರ್ಬರ ಅವರ ಏಕೈಕ ವಾರೀಸುದಾರರಾಗಿದ್ದಳು. ಆ 12 ವಯಸ್ಸಿನ ಬಾಲಕಿಗೆ 780 ಕೋಟಿ ಡಾಲರ್(ಸುಮಾರು 6240 ಕೋಟಿ ರೂಪಾಯಿಗಳು) ದೊರೆತಿತ್ತು.

30ನೇ ವಯಸ್ಸಿನಲ್ಲಿ ಬಾರ್ಬರ ವಿವಾಹಿತಳಾದಳು. ರಶ್ಯದ ರಾಜಕುಮಾರನಾಗಿದ್ದ ಇಗೋಲ್ ಟ್ರ್ಯುಬೋಟ್‌ಸ್ಕಿ ವರನಾಗಿದ್ದ. ಆದರೆ ಬಾರ್ಬರಳಿಗೆ ಪತಿಯ ಬದಲಾವಣೆಯು ಬಟ್ಟೆ ಬದಲಾಯಿಸಿದಷ್ಟೇ ಸಲೀಸಾಗಿತ್ತು. ನೆಮ್ಮದಿಯ ಕುಟುಂಬ ಬಾಳ್ವೆ ಆಕೆಗೆ ಸಾಧ್ಯವಾಗಲಿಲ್ಲ. ಆಕೆ ಪದೇಪದೇ ಪತಿಯಂದಿರನ್ನು ಬದಲಾಯಿಸಿದಳು. ಹೆಚ್ಚಿನ ಪತಿಯಂದಿರು ರಾಜಕುಮಾರರು ಅಥವಾ ದೊರೆಗಳಾಗಿದ್ದರು. ಪ್ರಖ್ಯಾತ ಹಾಲಿವುಡ್ ನಟ ಕಾರಿಗ್ರಾಂಟ್ ಆಕೆಯ ನೆಚ್ಚಿನ ಪತಿಯಾಗಿದ್ದ. ಆದರೆ ಕಾರಿಗ್ರಾಂಟಿಗೆ ಆಕೆಯು ಪ್ರೀತಿಯ ಪತ್ನಿಯಾಗಿರಲಿಲ್ಲ.

ಸುಖಸಂಪನ್ನ ಜೀವನಸಾಗಿಸಿ, ಅರಮನೆಗಳಲ್ಲಿ ವಾಸಿಸಿ, ಏಳು ಪತಿಯಂದಿರನ್ನು ವರಿಸಿಯೂ ಆಕೆಗೆ ಸಂತೃಪ್ತಿ ದೊರೆಯಲಿಲ್ಲ. ಸಂತುಷ್ಟಿಯನ್ನು ಸಂಪತ್ತಿನಿಂದ ಖರೀದಿಸಲು ಸಾಧ್ಯವಿರಲಿಲ್ಲ. ಬಾರ್ಬರಳಿಗೆ ಕೇವಲ ಒಂದೇ ಸಂತಾನ ಪ್ರಾಪ್ತವಾಗಿತ್ತು. ಆ ಪುತ್ರನು ಒಂದು ವಿಮಾನ ಅಪಘಾತದಲ್ಲಿ ನಿಧನನಾದನು. ಸಂಪತ್ತಿದ್ದರೂ ಆಕೆಯು ವಿಷಾದದ ಬಂದಿಯಾದಳು. ಸಂಪತ್ತಿನಿಂದ ನೆಮ್ಮದಿಯನ್ನು ಖರೀದಿಸಬಹುದಾಗಿದ್ದರೆ ಅದು ಆಕೆಗೆ ಸುಲಭವಾಗಿತ್ತಲ್ಲವೇ.

ಪ್ರಖ್ಯಾತ ಹಾಲಿವುಡ್ ನಟಿ ಎಲಿಝಬೆತ್ ಟೇಲರ್‌ಳ ಕಿರಿಯ ಪುತ್ರ ಕ್ರಿಸ್ಟಾಫರ್ ವಿಂಡಿಂಗ್ ಅಮೇರಿಕದ ಕೋಟೀಶ್ವರನಾಗಿದ್ದ ಜೆ. ಪೋಲ್‌ಗೆಟ್ಟಿಯ ಪುತ್ರಿ ಎಲಿನ್‌ಗೆಟ್ಟಿಯನ್ನು ವಿವಾಹವಾಗಿದ್ದನು. ಆದರೆ ವಿವಾಹ ನಿಶ್ಚಯವಾದ ಕೂಡಲೇ ಕ್ರಿಸ್ಟಾಫರ್ ಮನೋರೋಗಿಯಾದ. ಎಲಿನಳನ್ನು ಇತರರು ಅಪಹರಿಸದಂತೆ ನೋಡಿಕೊಳ್ಳುವುದೇ ದೊಡ್ಡ ಸಮಸ್ಯೆಯಾಯಿತು. 1973ರಲ್ಲಿ ಎಲಿನಳ ಹಿರಿಯ ಸಹೋದರ ಜೀನ್‌ಪೋಲ್ ಗೆಟ್ಟಿಯನ್ನು ಇಟೇಲಿಯನ್ ದರೋಡೆಕೋರರು ಅಪಹರಿಸಿದರು. ಆತನ ಬಲಗಿವಿಯನ್ನು ಅವರು ಕತ್ತರಿಸಿದರು. ಅವರ ತಾತ 83 ವಯಸ್ಸಿನ ಪೋಲ್‌ಗೆಟ್ಟಿಯನ್ನೂ ಅವರು ಸಾಯುವುದಕ್ಕಿಂತ ಮೂರು ವರ್ಷಗಳ ಮುಂಚೆ ದರೋಡೆಕೋರರು ಅಪಹರಿಸಿದ್ದರು. ಅವರ ಬಿಡುಗಡೆಗಾಗಿ 30 ಲಕ್ಷ ಡಾಲರ್ ತೆರಬೇಕಾಯಿತು. ಹಣದ ಕೊರತೆಯ ಬದಲಾಗಿ, ಹೇರಳ ಹಣವೇ ಅವರ ಸಮಸ್ಯೆಯಾಗಿತ್ತು. ಅತಿ ಸಂಪತ್ತಿನಿಂದ ಶಾಂತಿ ನೆಮ್ಮದಿ ದೊರೆಯಲಾರದೆಂಬುದಕ್ಕೆ ಈ ಘಟನೆಗಳು ಸಾಕ್ಷಿಯಾಗಿವೆ.

ರಫ್ತು ವ್ಯಾಪಾರಿ ಮತ್ತು ಶ್ರೀಮಂತನಾಗಿದ್ದ ನನ್ನ ಓರ್ವ ಮಿತ್ರನು ಮಾತಿನ ಮಧ್ಯೆ ಹೀಗೆ ಹೇಳಿದ: "ನಾನು ಚಿಕ್ಕವನಾಗಿದ್ದಾಗ ನಮ್ಮ ಕುಟುಂಬವು ಶ್ರೀಮಂತವಾಗಿರಲಿಲ್ಲ. ಆದರೆ ಅಂದು ನಾನು ಬಹಳ ಸಂತೃಪ್ತನಾಗಿದ್ದೆ. ಇಂದು ಅಲ್ಲಾಹನ ಕೃಪೆಯಿಂದ ನನ್ನಲ್ಲಿ ಧಾರಾಳ ಹಣವಿದೆ. ಆದರೆ, ಯಾವಾಗಲೂ ಬೇಸರ."

ಆಗ ನಾನು ಆತನಿಗೆ ಒಂದು ಕಥೆ ಹೇಳಿದೆ: ಪಂಚತಾರಾ ಹೊಟೇಲಿನಲ್ಲಿ ವಾಸವಾಗಿರುವ ಓರ್ವ ಕೋಟ್ಯಾಧಿಪತಿಯು ರಾತ್ರಿ ನಿದ್ರೆ ಬಾರದೆ ಹೊಟೇಲಿನ ವರಾಂಡದಲ್ಲಿ ಅಡ್ಡಾಡುತ್ತಿದ್ದ. ಆಗ ದೂರದ ಅಂಗಡಿ ಚಾವಡಿಯಲ್ಲಿ ಓರ್ವ ವ್ಯಕ್ತಿಯನ್ನು ಆತ ನೋಡಿದ. ಆತ ಓರ್ವ ಕೂಲಿ ಕೆಲಸದವನಾಗಿದ್ದ. ಆತ ರಾತ್ರಿ ಎಂಟೂವರೆ ಗಂಟೆಗೆ ಬರುತ್ತಾನೆ.

ಒಂದರ್ಧ ತಾಸು ಹಾಡುತ್ತಾ ಬೀಡಿ ಸೇದುತ್ತಾ ಕಳೆಯುತ್ತಾನೆ. ಅನಂತರ ಅಂಗಡಿಯ ಛಾವಣಿಯಲ್ಲಿ ಮಡಚಿರಿಸಿದ್ದ ಚಾಪೆಯನ್ನು ತೆಗೆದು ಬಿಡಿಸಿ ಮಲಗಿ ಸುಖವಾಗಿ ನಿದ್ರಿಸುತ್ತಾನೆ. ಬೆಳಗಾತ ಶ್ರೀಮಂತನು ಎಚ್ಚೆತ್ತು ನೋಡಿದಾಗ ಆತ ಸುಖವಾಗಿ ನಿದ್ರಿಸುತ್ತಿರುವುದು ಕಾಣಿಸುತ್ತದೆ. ಐದು ಗಂಟೆಗೆ ಆತ ಎದ್ದೇಳುತ್ತಾನೆ. ಹೊರಗೆಲ್ಲಿಗೋ ಹೋಗಿ ಹಲ್ಲುಜ್ಜಿ, ಮುಖತೊಳೆದು ಪ್ರಾತಃ ವಿಧಿಗಳನ್ನು ಮುಗಿಸಿ ಚಾ ಕುಡಿದು ಮರಳುತ್ತಾನೆ. ತರುವಾಯ ಚಾಪೆಯನ್ನು ಮಡಚಿ ಯಥಾ ಸ್ಥಾನದಲ್ಲಿರಿಸಿ ಏಳುಗಂಟೆಗೆ ಕೆಲಸಕ್ಕೆ ಹೋಗುತ್ತಾನೆ. ಕೋಟ್ಯಾಧಿಪತಿಯು ಈ ವಿಷಯವನ್ನು ತನ್ನ ನೆರೆಯಲ್ಲಿರುವ ಮಿತ್ರನಿಗೆ ಹೇಳುತ್ತಾನೆ, "ನೋಡು, ನಾನು ದೊಡ್ಡ ಶ್ರೀಮಂತ! ನನಗೆ ಎಲ್ಲ ಸೌಲಭ್ಯಗಳಿದ್ದರೂ ರಾತ್ರಿ ಎರಡು ಗಂಟೆ ಸರಿಯಾಗಿ ನಿದ್ರೆ ಮಾಡಲು ಸಾಧ್ಯವಾಗುವುದಿಲ್ಲ. ಆ ಮನುಷ್ಯನಾದರೋ? ಓರ್ವ ಸಾಮಾನ್ಯ ಕೂಲಿಯಾಳು. ಯಾವ ಚಿಂತೆಯೂ ಇಲ್ಲ. ಹಗಲು ದುಡಿಯುತ್ತಾನೆ. ಸಾಧಾರಣ ಆಹಾರ ಸೇವಿಸುತ್ತಾನೆ. ರಾತ್ರಿ ಬರುತ್ತಾನೆ ಅಂಗಡಿಯ ಚಾವಡಿಯಲ್ಲಿ ಹರುಕು ಚಾಪೆಯಲ್ಲಿ ಮಲಗಿ ನಿದ್ರಿಸುತ್ತಾನೆ. ಆದರೂ ಆತನಿಗೆ ಸುಖ ನಿದ್ರೆ ದೊರೆಯುತ್ತದೆ.

ಮಿತ್ರ ಗೊಳ್ಳನೆ ನಕ್ಕ. ಅನಂತರ ಹೇಳಿದ: "ಸರಿ, ನಾನು ಆ ಸಮಸ್ಯೆಯನ್ನು ಬಗೆ ಹರಿಸುತ್ತೇನೆ. ನನಗೆ 95 ರೂ. ಕೊಡು." ಕೋಟ್ಯಾಧಿಪತಿ ಕೊಟ್ಟ ಹಣವನ್ನು ಯಾರಿಗೂ ಕಾಣಿಸದಂತೆ ಸುರುಟಿದ ಚಾಪೆಯಲ್ಲಿ ಆ ಮಿತ್ರ ಇರಿಸಿ ಬಂದ. ಮರುದಿನ ಆ ಕೂಲಿಯಾಳು ಚಾಪೆಯನ್ನು ಬಿಡಿಸಿದಾಗ 95 ರೂ. ಕಾಣಿಸಿತು. ಆತ ಪದೇಪದೇ ಹಣವನ್ನು ಎಣಿಸಿ ನೋಡಿದ. ಆತನ ಜೀವಮಾನದಲ್ಲಿಯೇ ಇಷ್ಟೊಂದು ಹಣ ಒಮ್ಮೆಯೂ ಆತನ ಕೈಯಲ್ಲಿ ಜಮೆಯಾಗಿರಲಿಲ್ಲ. ಈ ಹಣ ಇಲ್ಲಿ ಹೇಗೆ ಬಂತು? ಯಾರು ತಂದಿರಿಸಿದರು? ಆ ಬಗ್ಗೆ ಆತ ಹೆಚ್ಚು ಚಿಂತಿಸುವ ಗೋಜಿಗೆ ಹೋಗಲಿಲ್ಲ. ನನ್ನ ಅವಸ್ಥೆಯನ್ನು ನೋಡಿದ ದೇವನೇ ಕರುಣೆಯಿಂದ ನೀಡಿರಬಹುದು. ನಾನು ಈ ತನಕ ಯಾರನ್ನೂ ವಂಚಿಸಿಲ್ಲವಷ್ಟೆ.... ಆ ಬಳಿಕ ಆತ 95ನ್ನು 100 ರೂ. ಮಾಡಲು ಪ್ರಯತ್ನಿಸಿದ. ಪ್ರತಿದಿನ ಒಂದು ರೂ. ಉಳಿಸಿ ಐದು ದಿನಗಳಲ್ಲಿ 100 ರೂ. ಮಾಡಿ, ಭದ್ರವಾಗಿ ತನ್ನ ಪರ್ಸ್‌ನಲ್ಲಿರಿಸಿದ. ಇದರೊಂದಿಗೆ ಆತನ ಸಂತೋಷ ಮತ್ತು ಹಾಡು ನಿಂತಿತು. ಒಂದೆರಡು ವರ್ಷಗಳ ಬಳಿಕ ಆ ಕೋಟ್ಯಾಧಿಪತಿಗೆ ಅದೇ ಹೊಟೇಲಿನಲ್ಲಿ ತಂಗುವ ಪ್ರಸಂಗ ಬಂತು. ಅಂದು ಆ ಅಂಗಡಿಯ ಚಾವಡಿಯಲ್ಲಿ ಆ ವ್ಯಕ್ತಿ ಕಾಣಿಸಲಿಲ್ಲ. ತನ್ನ ಮಿತ್ರನೊಡನೆ ಆತನ ಬಗ್ಗೆ ವಿಚಾರಿಸಿದ.

"ಆತ ಈಗ ಒಂದು ಸಣ್ಣ ಗುಡಿಸಲಿನಲ್ಲಿ ವಾಸವಾಗಿದ್ದಾನೆ. ಆತ ವಿವಾಹವಾಗುವ ಪ್ರಯತ್ನದಲ್ಲಿದ್ದಾನೆ." ನನಗೆ ಆತನ ಈಗಿನ ಸ್ಥಿತಿಯ ಬಗ್ಗೆ ತಿಳಿಯಬೇಕಾಗಿದೆ. ಆ ಆಸಾಮಿ ಈಗಲೂ ಹಿಂದಿನಂತೆಯೇ ಸಂತೋಷವಾಗಿದ್ದಾನೆಯೇ? ಕೋಟ್ಯಾಧಿಪತಿ ವಿಚಾರಿಸಿದ. ಇಲ್ಲ, ಆತನ ಸಂತೋಷವೆಲ್ಲಾ ಹೋಗಿ ಬಿಟ್ಟಿದೆ. ಅಂದು ಆ ಮಹಾನುಭಾವನಿಗೆ ಯಾವ ಆಗ್ರಹವೂ ಇರಲಿಲ್ಲ. ನಿಮ್ಮ ಹಣವು ಆತನಲ್ಲಿ ಬಯಕೆಗಳನ್ನು ಹುಟ್ಟಿಸಿತು. ಅನಂತರ ಆ ಹಣವನ್ನು ಹೆಚ್ಚಿಸಲು ಪ್ರಯತ್ನಿಸಿದ. ತನ್ನ ಸಂಪೂರ್ಣ ಸಮಯವನ್ನು ಅದಕ್ಕಾಗಿ ವ್ಯಯಿಸಿದ. ಸಂತೋಷಕ್ಕೆ ಬಿಡುವಿಲ್ಲದಂತಾಯಿತು."

ಈ ಕಥೆಯು ನಿಜವಾಗಿರಲಿ, ಸುಳ್ಳಾಗಿರಲಿ ಅದರಲ್ಲೊಂದು ನೀತಿ ಪಾಠವಿದೆ. ಹಣ ಸಂಪಾದಿಸುವಾಗ ಹೆಚ್ಚೆಚ್ಚು ಸಂಪಾದಿಸಬೇಕೆಂದು ತೋಚುತ್ತದೆ. ಹಣದ ಅವಶ್ಯಕತೆಗಳು ಹೆಚ್ಚುತ್ತವೆ. ಎಷ್ಟು ಸಂಪಾದಿಸಿದರೂ ಸಾಕಾಗುವುದಿಲ್ಲ. ಆಗ ಕಳವಳವೂ ಹೆಚ್ಚುತ್ತದೆ.

ಕಲ್ಲಿಕೋಟೆಯ ವೈದ್ಯಕೀಯ ಕಾಲೇಜಿಗೆ ವರ್ಗಾವಣೆಯಾಗಿ ಒಂದು ಸಣ್ಣ ಮನೆ ಬಾಡಿಗೆಗೆ ಪಡೆದು ವಾಸವಾಗಿದ್ದ ಓರ್ವ ಪ್ರೊಫೆಸರ್‌ರ ನೆನಪಾಗುತ್ತಿದೆ. ಆರಂಭದಲ್ಲಿ ಅವರ ಮನೆಗೆ ಕೇವಲ ಮೂರ್‍ನಾಲ್ಕು ರೋಗಿಗಳು ಬರುತ್ತಿದ್ದರು. ಅವರು ತಲಾ ಐದು ರೂ. ಫೀಸು ಪಡೆಯುತ್ತಿದ್ದರು. ಅವರು ಬಹಳ ಸಂತೋಷ ಮತ್ತು ಆಸಕ್ತಿಯಿಂದ ರೋಗಿಗಳ ತಪಾಸಣೆ ನಡೆಸುತ್ತಿದ್ದರು. ಕೆಲವೇ ತಿಂಗಳುಗಳಲ್ಲಿ ಪ್ರಸಿದ್ಧರಾದರು. ರೋಗಿಗಳು ಹೆಚ್ಚಿದಂತೆಯೇ ಕ್ರಮೇಣ ಫೀಸು ಹತ್ತು ರೂ. ಆಯಿತು. ಹದಿನೈದಾಯಿತು. ಕೊನೆಗೆ ಫೀಸು ರೂ. 25 ಆಯಿತು. ಕಾಲೇಜಿನಿಂದ ಬಂದಾಗ ಮನೆ ತುಂಬಾ ರೋಗಿಗಳು. ಅಲ್ಪಕಾಲದಲ್ಲಿಯೇ ಅವರು ದೊಡ್ಡ ಶ್ರೀಮಂತರಾದರು. ಶೀಘ್ರದಲ್ಲಿಯೇ ಅವರು ವಾಸವಾಗಿದ್ದ ಮನೆಯ ಸಮೀಪ ಸ್ವಲ್ಪ ಸ್ಥಳ ಖರೀದಿಸಿದರು. ಮುಂದಿನ ತಿಂಗಳು ಮನೆಯ ಅಡಿಪಾಯ ಹಾಕಿದರು. ಮನೆಯ ಕೆಲಸ ಆರಂಭಿಸಿದ ಬಳಿಕ ಹೆಚ್ಚೆಚ್ಚು ಸಂಪಾದಿಸುವುದೇ ವೈದ್ಯರ ಗುರಿಯಾಯಿತು. ಹಿಂದೆ ಕೇವಲ ಮೊದಲ ಬಾರಿ ಫೀಸು ಪಡೆಯುತ್ತಿದ್ದ ವೈದ್ಯರು ಪ್ರತಿ ಬಾರಿಯೂ 25 ರೂ. ವಸೂಲು ಮಾಡಲಾರಂಭಿಸಿದರು. ಅತ್ಯಾಧುನಿಕ ಸೌಲಭ್ಯಗಳಿರುವ ಮನೆ ನಿರ್ಮಿಸಬೇಕೆಂಬ ಆಗ್ರಹ ದಿಂದ ಅವರು ತಮ್ಮ ಗಮನವನ್ನು ಮನೆ ನಿರ್ಮಾಣದಲ್ಲಿಯೇ ಕೇಂದ್ರೀಕರಿಸಿದರು. ರೋಗಿಯ ತಪಾಸಣೆಯನ್ನು ಗಡಿಬಿಡಿಯಿಂದ ಮಾಡಿ ಮನೆ ನಿರ್ಮಾಣದ ಸ್ಥಳಕ್ಕೆ ಹೋಗುತ್ತಾರೆ, ರೋಗಿಗಳ ಮಾತುಗಳನ್ನು ಸರಿಯಾಗಿ ಗಮನಿಸುವುದಿಲ್ಲ ಎಂದು ಮುಂತಾದ ದೂರುಗಳು ಕೇಳಿ ಬರಲಾರಂಭಿಸಿದುವು. ಅರ್ಥಾತ್ ಹಣದ ಅತ್ಯಾಗ್ರಹದಿಂದಾಗಿ ರೋಗಿ ಗಳೊಂದಿಗೆ ನ್ಯಾಯ ಪಾಲಿಸಲೂ ಅವರಿಗೆ ಸಾಧ್ಯವಾಗಲಿಲ್ಲ. ಅವರು ತಮ್ಮ ಹಿಂದಿನ ನೆಮ್ಮದಿಯನ್ನು ಕಳೆದುಕೊಂಡರು. ಕೇವಲ ಹಣದಿಂದಲೇ ಮನಃಶಾಂತಿ ಸಾಧ್ಯವಿಲ್ಲವೆಂದು ಇದರಿಂದ ವ್ಯಕ್ತವಾಗುವುದಿಲ್ಲವೇ?

ಖ್ಯಾತ ವಿಜ್ಞಾನಿ ಓಪನ್ ಹೀಮರ್ ಮಹಾಮೇಧಾವಿ ಮತ್ತು ಪ್ರತಿಭಾಶಾಲಿ ಯಾಗಿದ್ದರು. ಭೌತಶಾಸ್ತ್ರದಲ್ಲಿ ಬಿರುದು ಮತ್ತು ಅನೇಕ ಪ್ರಶಸ್ತಿಗಳನ್ನು ಸಂಪಾದಿಸಿ ಪ್ರಖ್ಯಾತರಾಗಿದ್ದ ಈ ವಿಜ್ಞಾನಿಯು ಅಣುಬಾಂಬನ್ನು ಸಂಶೋಧಿಸಿದಾಗ ಅದೊಂದು ಮಹಾವಿಜಯವೆಂದು ಇತರ ವಿಜ್ಞಾನಿಗಳು ಹೇಳಿದರು. ಆದರೆ ಅವರು ತಮ್ಮ ನಿಧನದ ಮೂರು ತಿಂಗಳ ಮುಂಚೆ ನಾನು ಸಂಪೂರ್ಣ ಪರಾಭವ ಹೊಂದಿರುವೆನೆಂದು ಹೇಳಿದರು. ನನ್ನ ಸಾಧನೆಗಳು ವಿಜಯವಾಗಿರಲಿಲ್ಲವೆಂದು ಅವರು ಬಹಿರಂಗವಾಗಿ ಒಪ್ಪಿಕೊಂಡಿದ್ದರು.

ಚಾರ್ಲ್ಸ್ ರಾಜ ಮತ್ತು ಡಯಾನರ ವಿವಾಹವು ಜಗತ್ಪ್ರಸಿದ್ಧವಾಗಿದೆಯಷ್ಟೆ. ವಿವಾಹದ ದಿನ ಸಮೀಪಿಸುತ್ತಿದ್ದಂತೆಯೇ ಇಡೀ ದೇಶವು ಆನಂದೋಲ್ಲಾಸದಲ್ಲಿ ಮುಳುಗಿತ್ತು. ಆದರೆ ಡಯಾನ ಮಾತ್ರ ತೀವ್ರ ದುಃಖಿತಳಾಗಿದ್ದಳು. ಚಾರ್ಲ್ಸ್ ರಾಜಕುಮಾರ ಪೋಲೋ ಆಡುತ್ತಿದ್ದ ಮೈದಾನದಲ್ಲಿ ಬಿಕ್ಕಿಬಿಕ್ಕಿ ಅತ್ತಿದ್ದಳೆಂದು ಸುದ್ದಿಯಾಗಿತ್ತು. ಆಟ ಮುಗಿಯುವುದಕ್ಕಿಂತ

ಮುಂಚೆಯೇ ಆಕೆ ಅಲ್ಲಿಂದ ಓಡಿಹೋದಳಂತೆ. ಆಕೆಯ ಭಾರವು ಹತ್ತು ಪೌಂಡ್ ಕಡಿಮೆಯಾಯಿತು! ಇದಕ್ಕೆ ಕಾರಣವೇನು? ಖ್ಯಾತಿಯ ಪರಾಕಾಷ್ಠೆಯು ಡಯಾನಳಲ್ಲಿ ಜಿಗುಪ್ಸೆ ಹುಟ್ಟಿಸಿತ್ತು. ವಿವಾಹ ನಿರ್ಣಯಿಸಿದ ದಿನದಿಂದಲೇ ಇಡೀ ದೇಶವು ಡಯಾನಳ ಬೆನ್ನುಹತ್ತಿತ್ತು. ಎತ್ತ ತಿರುಗಿದರೂ ಸಾವಿರಾರು ಕಣ್ಣುಗಳು. ಏನು ಮಾಡಿದರೂ ಸುದ್ದಿ. ಹೀಗೆ ನಿಶ್ಚಿಂತ ಜೀವನವು ಆಕೆಗೆ ಸಮಸ್ಯೆಯಾಯಿತು. ಈ ಕೋಲಾಹಲಗಳ ಮಧ್ಯೆ 20 ವಯಸ್ಸಿಗಿಂತ ಮುಂಚೆಯೇ ನೆಮ್ಮದಿ ನಾಸ್ತಿಯಾಯಿತು. ವಿವಾಹ ಮತ್ತು ವಧುವಿಗಾಗಿ ಬ್ರಿಟಿಷ್ ಸರಕಾರವು ಕೋಟ್ಯಾಂತರ ರೂ. ವ್ಯಯಿಸಿತು. ಜನರ ಖರ್ಚು ಅದಕ್ಕಿಂತಲೂ ಎಷ್ಟೋ ಇಮ್ಮಡಿ. ಹಾಗಿದ್ದರೂ ಈ ಅತಿ ಪ್ರಖ್ಯಾತಿಯನ್ನು ಡಯಾನ ದ್ವೇಷಿಸಿದಳು. "ವಿಷಯವು ಇಷ್ಟೊಂದು ಕ್ಲಿಷ್ಟಕರವೆಂದು ನಾನು ಭಾವಿಸಿರಲಿಲ್ಲ. ದಿನ ಸಂದಂತೆಯೇ ನನ್ನ ಕಳವಳ ಹೆಚ್ಚುತ್ತಿದೆ." ಇದು ಡಯಾನಳ ಪ್ರತಿಕ್ರಿಯೆ. ಆ ವಿವಾಹ ಸಂಬಂಧದ ಶಿಥಿಲತೆಯಲ್ಲಿಯೂ ಪ್ರಸಿದ್ಧಿಯ ಪಾತ್ರವಿತ್ತು.

ಡಯಾನಳ ಖಾಸಗಿ ಜೀವನವು ನೀತಿ ಬಾಹಿರವಾಗಿತ್ತು. ವಿವಾಹವಾಗಿ ಎರಡು ಮಕ್ಕಳಾದ ಬಳಿಕ ಆಕೆಯು ಹೆವಿಟ್ ಎಂಬ ಸೈನಿಕನೊಡನೆ ಸಂಬಂಧ ಬೆಳೆಸಿದಳು. ಹೆವಿಟ್‌ನೊಂದಿಗಿನ ಅಕ್ರಮ ಸಂಬಂಧವನ್ನು ಡಯಾನ ಸಮರ್ಥಿಸಿದಳು. ಹೆವಿಟ್‌ನನ್ನು ನೋಡಿದರೆ ಯಾವ ಸ್ತ್ರೀಯೂ ಮೈಮರೆತು ಬಿಡಬಹುದಂತೆ. ಡಯಾನಳೊಂದಿಗಿನ ಸಂಬಂಧವು ತನಗೆ ಅಪಾರ ತೃಪ್ತಿ ನೀಡಿದೆಯೆಂದು ಹೆವಿಟ್ ಕೂಡಾ ಹೇಳಿದ್ದಾನೆ. ಇನ್ನೊಂದೆಡೆಯಲ್ಲಿ ಡಯಾನಳ ಪತಿಯಾಗಿದ್ದ ಚಾರ್ಲ್ಸ್ ರಾಜನಿಗೆ ಕಾಮಿಲ ಪಾರ್ಕರ್ ಎಂಬ ಹಳೆಯ ಪ್ರೇಯಸಿಯೊಂದಿಗೆ ಸಂಪರ್ಕವಿದೆಯೆಂಬ ಆರೋಪ ಕೇಳಿಬಂತು. ಏನಿದ್ದರೂ ಕೊನೆಗೆ ಇಬ್ಬರೂ ಬೇರ್ಪಟ್ಟರು.

ಅನಂತರ ಡಯಾನಳ ಲೈಂಗಿಕ ಅರಾಜಕತೆಯ ಧಾರಾವಾಹಿಯನ್ನು ಪತ್ರಿಕೆಗಳು ಪ್ರಕಟಿಸಿದುವು. ಡಯಾನ ಅನೇಕ ಅಕ್ರಮ ಸಂಬಂಧಗಳನ್ನು ಹೊಂದಿದ್ದಳು. ಆದರೂ ಆಕೆ ಮಾಧ್ಯಮಗಳಲ್ಲಿ ತುಂಬಿ ನಿಂತಳು. ಹಾಗಿದ್ದರೂ ಆಕೆಗೆ ಒಮ್ಮೆಯೂ ನೆಮ್ಮದಿಯಿರಲಿಲ್ಲ. ಸುಭದ್ರ ಕುಟುಂಬ ಜೀವನ ಪ್ರಾಪ್ತವಾಗಲಿಲ್ಲ. ಡಯಾನಾ ರಾಜಕುಮಾರಿಯ ಪ್ರಸಿದ್ಧ ದುರಂತ ಮರಣವೂ ಜಗತ್ತಿನಾದ್ಯಂತ ಚರ್ಚಾ ವಿಷಯವಾಯಿತು. ಪ್ರಸಿದ್ಧಿಯೇ ಆಕೆಯನ್ನು ಆಕೆಯ ಅಂತ್ಯಕ್ಕೆ ಸಾಗಿಸಿತ್ತು.

ಇದು ಬ್ರಿಟಿಷ್ ರಾಜಕುಟುಂಬದ ಕಥೆ; ಹಣ ಮತ್ತು ಪ್ರಸಿದ್ಧಿಯ ಉತ್ತುಂಗಕ್ಕೆ ತಲಪಿ ಪ್ರಯೋಜನವೇನಿದೆ? ಜೀವನದಲ್ಲಿ ನೆಮ್ಮದಿಯಿಲ್ಲದಿದ್ದರೆ.

ಆ•ಖ

# ಅಶಾಂತಿಯ ತೀರಗಳಲ್ಲಿ

ಇಂದಿನ ಕಾಲದಲ್ಲಿ ಸಿನೆಮಾ ನಟನಟಿಯರು ಹೆಚ್ಚು ಶ್ರೀಮಂತರು ಮತ್ತು ಹೆಸರು ವಾಸಿಯಾಗಿರುತ್ತಾರೆ. ಅವರ ಜೀವನವು ಸುಖಮಯ ಮತ್ತು ನೆಮ್ಮದಿದಾಯಕವಾಗಿದೆಯೇ? ಖ್ಯಾತ ಸಿನೆಮಾ ತಾರೆ ಶೋಭಾ, ರಾಷ್ಟ್ರೀಯ ಪ್ರಶಸ್ತಿ ದೊರೆತ ಹದಿಮೂರನೆ ದಿನ ಆತ್ಮಹತ್ಯೆ ಮಾಡಿದಳು. ಹಾಗೆಯೇ ವಿಜಯ ಶ್ರೀ, ಕನ್ನಡ ನಟಿ ಕಲ್ಪನಾ, ಲಕ್ಷ್ಮಿಶ್ರೀ, ಹಾಲಿವುಡ್ ನಟಿ ಮರ್ಲಿನ್ ಮನ್ರೋ ಮುಂತಾದ ಅನೇಕ ನಟಿಯರು ಜೀವನದ ಜಿಗುಪ್ಸೆಯಿಂದ ತಮ್ಮ ಬದುಕನ್ನು ಕೊನೆಗೊಳಿಸಿದ್ದರು.

ಬಂಗಾಳಿ ಸಿನೆಮಾದ ಚಿರನಾಯಕನಾಗಿದ್ದ ಉತ್ತಮ್ ಕುಮಾರ್. ಗೌರಿ ಆತನ ಪ್ರಥಮ ಪತ್ನಿಯಾಗಿದ್ದಳು. 1952ರಲ್ಲಿ ನಟಿ ಸುಪ್ರಿಯಾಳನ್ನು ಪ್ರೀತಿಸಲಾರಂಭಿಸಿದಾಗ ಗೌರಿಯು ಆತನಿಂದ ದೂರವಾದಳು. ಅಂದು ಸುಪ್ರಿಯಾಗೆ ಓರ್ವ ಪತಿಯಿದ್ದ. ಆತ ಓರ್ವ ಪತ್ರಕರ್ತ. ಆದರೆ ಅವರ ಕುಟುಂಬ ಜೀವನವು ವಿಫಲವಾಯಿತು. 1962ರಲ್ಲಿ ಸುಪ್ರಿಯಾ ಪತಿಯೊಂದಿಗೆ ಜಗಳಾಡಿ ಹೊಸ ಫ್ಲ್ಯಾಟ್‌ನಲ್ಲಿ ವಾಸ ಆರಂಭಿಸಿದಳು. ಉತ್ತಮ್ ಕುಮಾರ್ ದಿನಾಲು ಅಲ್ಲಿ ಸಂದರ್ಶಿಸುತ್ತಿದ್ದನು. ಇದರಿಂದ ಗೌರಿಗೆ ವಿರಸವುಂಟಾಯಿತು. ಕಾನೂನು ಬದ್ಧವಾಗಿ ಗೌರಿಗೆ ವಿವಾಹ ವಿಚ್ಛೇದನ ನೀಡದಿದ್ದುದರಿಂದ ಉತ್ತಮ್‌ಕುಮಾರ್ ಸುಪ್ರಿಯಾಳನ್ನು ಗುಪ್ತವಾಗಿ ವಿವಾಹವಾದನು.

1979ರಲ್ಲಿ ಕ್ಷುಲ್ಲಕ ಕಾರಣಗಳಿಂದಾಗಿ ಉತ್ತಮ್ ಕುಮಾರ್ ಮತ್ತು ಸುಪ್ರಿಯಾಳಿಗೆ ಜಗಳವಾಯಿತು. ಪುತ್ರಿ ಸೀಮಳ ಮಧ್ಯ ಪ್ರವೇಶದಿಂದ ಜಗಳ ಕೊನೆಗೊಂಡರೂ ಇನ್ನು ಮುಂದೆ ಫ್ಲ್ಯಾಟಿಗೆ ಬರಬಾರದೆಂದು ಸುಪ್ರಿಯಾ ಆತನೊಡನೆ ಹೇಳಿದಳು. ಉತ್ತಮ್ ಕುಮಾರ್‌ನ ಮೇಲೆ ದಾವೆ ಹೂಡಿದಳು. ಕೆಲ ದಿನಗಳ ಬಳಿಕ ಇಬ್ಬರಲ್ಲಿಯೂ ರಾಜಿ ಯಾಯಿತು. ದಾವೆಯನ್ನು ಹಿಂತೆಗೆದುಕೊಳ್ಳಲಾಯಿತು. 1981 ಜುಲೈ ತಿಂಗಳಲ್ಲಿ ಶೂಟಿಂಗ್ ಮುಗಿಸಿ ಮನೆಗೆ ಮರಳಿದಾಗ ಸುಪ್ರಿಯಾ ಮನೆಯಲ್ಲಿರಲಿಲ್ಲ. ಯಾವುದೋ ಪಾರ್ಟಿಗೆ ಹೋಗಿರುವಳೆಂದು ತಿಳಿಯಿತು. ಉತ್ತಮ್‌ನಿಗೆ ಕೋಪ ಬಂತು. ಆತ ಕುಡಿಯಲಾ ರಂಭಿಸಿದ. ಅಮಿತ ಮದ್ಯಪಾನ ಮಾಡಿದ ಉತ್ತಮ್ ಕುಮಾರ್‌ನಿಗೆ ಬೆಳಗಾತ 4 ಗಂಟೆಗೆ ಎದೆ ಬೇನೆ ಕಾಣಿಸಿತು. ಆಸ್ಪತ್ರೆಯಲ್ಲಿ ಆತ ಕೊನೆಯುಸಿರೆಳೆದ. ಆದರೆ ಸುಪ್ರಿಯಾಳ ವಶಕ್ಕೆ ಮೃತದೇಹ ದೊರೆಯಲಿಲ್ಲ. ಗೌರಿಯು ಕಾನೂನು ಬದ್ಧ ಪತ್ನಿಯಾಗಿದ್ದಳಷ್ಟೆ. ಆಕೆಯ

ಮನೆಯವರು ಮೃತದೇಹವನ್ನು ಸ್ವೀಕರಿಸಿದರು. ಆ ಮುಖವನ್ನೊಮ್ಮೆ ಕೊನೆಯ ಬಾರಿ ನೋಡಲಿಕ್ಕೂ ಸುಪ್ರಿಯಾಳಿಗೆ ಸಾಧ್ಯವಾಗಲಿಲ್ಲ.

ಖ್ಯಾತ ಹಿಂದಿ ಸಿನೆಮಾ ನಟ ರಾಜೇಶ್ ಖನ್ನಾ ಮತ್ತು ಬಾಬ್ಬಿಯ ನಟನೆಯಿಂದ ಸಿನೆಮಾ ರಂಗದಲ್ಲಿ ಪ್ರಖ್ಯಾತಳಾದ ಡಿಂಪಲ್ ಕಪಾಡಿಯಾಳ ಜೀವನವನ್ನೊಮ್ಮೆ ನಾವು ಪರಿಶೀಲಿಸೋಣ. ಪ್ರಥಮ ಪತ್ನಿ ಅಂಜು ಮಹೇಂದ್ರಳಿಗೆ ವಿವಾಹ ವಿಚ್ಛೇದನ ನೀಡಿದ ಬಳಿಕ ರಾಜೇಶ್ ಖನ್ನಾ, ಡಿಂಪಲ್‌ಳನ್ನು ವಿವಾಹವಾದನು. ಆದರೆ ಅವರ ಕುಟುಂಬ ಜೀವನವು ಒಮ್ಮೆಯೂ ತೃಪ್ತಿಕರವಾಗಿರಲಿಲ್ಲ. ಅವರಿಗೆ ಏಳು ಮತ್ತು ಐದು ವಯಸ್ಸಿನ ಇಬ್ಬರು ಮಕ್ಕಳಿದ್ದರು. ಆದರೂ ಅವರಲ್ಲಿ ಜಗಳವಾಯಿತು. ಕೊನೆಗೆ ನ್ಯಾಯಾಲಯದ ಮೂಲಕ ವಿಚ್ಛೇದನ ಪಡೆಯಲು ಡಿಂಪಲ್ ನಿರ್ಬಂಧಿತಳಾದಳು. ಕ್ರೂರ ಮತ್ತು ಅಕ್ರಮ ವರ್ತನೆಯನ್ನು ವಿಚ್ಛೇದನಕ್ಕೆ ಕಾರಣವೆಂದು ಎತ್ತಿ ಹೇಳಲಾಗಿತ್ತು. ಅರ್ಜಿಯಲ್ಲಿ ಹೇಳಿದ ಕಾರಣಗಳು ಸ್ವಾರಸ್ಯಕರವಾಗಿತ್ತು. "ಒಮ್ಮೆ ನಾನು ಖನ್ನಾನನ್ನು ತೊರೆದು ಹೋಗಿದ್ದೆ. ಆದರೆ ಮುಂದೆ ಎಂದೆಂದಿಗೂ ಹಿಂದಿನಂತೆ ವರ್ತಿಸುವುದಿಲ್ಲವೆಂಬ ಮಾತನ್ನು ನಂಬಿ ಮರಳಿ ಬಂದೆ. ಆದರೆ ಆ ಬಳಿಕವೂ ಹಿಂಸೆ ಅನುಭವಿಸಬೇಕಾಯಿತು. ವಸ್ತುತಃ ನಾನು ಮನೆಯಲ್ಲಿ ಕೈದಿಯಾಗಿದ್ದೆ. ಅಜ್ಜಿಯ ಜತೆಯಲ್ಲಿ ನಾನು ವಾಸವಾಗಿದ್ದೆ. ಒಮ್ಮೆ ಅಲ್ಲಿಗೆ ಆಗಮಿಸಿದ ಖನ್ನಾ ನನ್ನನ್ನು ಹಿಡಿದೆಳೆದು ಕಾರಿನಲ್ಲಿ ಹಾಕಿದರು. ಅದಕ್ಕಿಂತ ಮುಂಚೆ ಅತ್ತೆಯ ಮುಖಕ್ಕೆ ಹೊಡೆದರು. ಆ ಬಳಿಕ ಯಾವಾಗಲೂ ಹೊಡೆತ, ಬಡಿತ.

ಅದೊಂದು ಆದಿತ್ಯವಾರ ಖನ್ನಾ ಮನೆಯಲ್ಲಿಲ್ಲದ ವೇಳೆಯಲ್ಲಿ ಡಿಂಪಲ್ ಮನೆ ಬಿಟ್ಟು ಜುಹೂವಿನಲ್ಲಿರುವ ತಂದೆ ತಾಯಿಗಳ ಮನೆಗೆ ಹೋದಳು. ಸೋಮವಾರವೇ ದೂರು ಸಲ್ಲಿಸಿದಳು. ನ್ಯಾಯಾಲಯವು ಡಿಂಪಲ್‌ಳ ಮನವಿಯನ್ನು ಸ್ವೀಕರಿಸಿತು. ಅವರ ಸಂಬಂಧವು ವಿವಾಹ ವಿಚ್ಛೇದನದಲ್ಲಿ ಮುಕ್ತಾಯವಾಯಿತು. ರಾಜೇಶ್ ಖನ್ನಾ ಮೂರನೆ ಬಾರಿ ವಿವಾಹವಾದರೂ ಅದೂ ಮುರಿದು ಬಿತ್ತು. ಸಂತೃಪ್ತಿಯನ್ನು ಹಣ ಮತ್ತು ಖ್ಯಾತಿಯಿಂದ ಸಂಪಾದಿಸಲು ಸಾಧ್ಯವಿಲ್ಲವೆಂದು ಇದರಿಂದ ವ್ಯಕ್ತವಾಗುತ್ತದೆ.

ಹಾಲಿವುಡ್ ತಾರೆಯರು ಬಹಳಷ್ಟು ಹಣ ಮತ್ತು ಖ್ಯಾತಿಯನ್ನು ಗಳಿಸಿದ್ದಾರೆ. ಆ ಪೈಕಿ ರಿಚರ್ಡ್ ಬರ್ಟನ್ ಮುಂಚೂಣಿಯಲ್ಲಿದ್ದಾನೆ. 1984ರ ಆಗಸ್ಟ್ ತಿಂಗಳಲ್ಲಿ ಆತ ನಿಧನನಾದನು. ಮರಣದ ಎರಡು ವರ್ಷಗಳ ಹಿಂದಿನ ತನಕ ಸಾವಿರಾರು ಸುಂದರಿಯರನ್ನು ಅಪ್ಪಿಕೊಂಡಿದ್ದ ಆ ಕೈಗಳಿಗೆ ನಡುಕ ಆರಂಭವಾಗಿತ್ತು. ವಾಸಿಯಾಗದ ನೋವಿನಿಂದ ಬೆನ್ನೆಲುಬು ಶಿಥಿಲವಾಗಿತ್ತು. ಅಂದಿನ ದಿನಗಳಲ್ಲಿ ಮದ್ಯಪಾತ್ರೆಯ ಕನಸು ಕಾಣಲೂ ಆತನಿಗೆ ಸಾಧ್ಯವಾಗುತ್ತಿರಲಿಲ್ಲ. ಅಂದಿನಿಂದ ಬರ್ಟನ್ ಮರಣದ ಕರೆಗೆ ಕಿವಿಗೊಡುತ್ತಿದ್ದ. ತನ್ನ ಶಕ್ತಿಯು ಕ್ಷೀಣಿಸಿದೆಯೆಂದು ಆತ ಬಹಿರಂಗವಾಗಿ ಒಪ್ಪಿದ. ರಿಚರ್ಡ್ ಬರ್ಟನ್, ಸಿನೆಮಾ ಪ್ರಪಂಚದ ಸೆಕ್ಸಿ ನಟಿ ಎಲಿಝಬೆತ್ ಟೈಲರ್ ಮತ್ತು ಸೌಂದರ್ಯರಾಣಿ ಸುಸಿಹಂಟ್‌ಳ ಪತಿಯಾಗಿದ್ದ. ಒಥೆಲ್ಲೋ, ಹಾರ್ಲೆಟ್, ಮಾರ್ಕ್ ಆಂಟನಿ ಮತ್ತು ಆರ್ಥರ್ ರಾಜ ಮುಂತಾದವರ ಪಾತ್ರದಲ್ಲಿ ಪ್ರೇಕ್ಷಕರ ಚಪ್ಪಾಳೆಗಿಟ್ಟಿಸಿದ್ದ ಕಾಲವನ್ನು ಜ್ಞಾಪಿಸಿದಾಗ

ಬರ್ಟನ್‌ಗೆ ನೋವು ಸಹಿಸಲಾಗಲಿಲ್ಲ. ಸಂಪತ್ತು ಮತ್ತು ಪ್ರಸಿದ್ಧಿಗಳಿಂದ ಆತನಿಗೆ ಶಾಂತಿ ನೆಮ್ಮದಿ ಪ್ರಾಪ್ತವಾಗಲಿಲ್ಲ. ಏಕೆಂದರೆ ಆತನಿಗೆ ಏಯ್ಡ್ಸ್ ಎಂಬ ಮಾರಕ ರೋಗವು ತಗಲಿತ್ತು.

ಬರ್ಟನ್‌ಗಿಂತ ಹೆಸರು ಗಳಿಸಿದ ಎಲಿಝಬೆತ್ ಟೈಲರ್‌ಳ ಗತಿ ಏನಾಯಿತು? ಆಕೆಯು ಮದ್ಯ ಮತ್ತು ಮಾದಕ ಔಷಧಿಯ ಗುಲಾಮಳಾದಳು. ನಾನು ಏನಾದರೂ ಹೇಳಲು ಪ್ರಯತ್ನಿಸಿದರೆ ಮಿದುಳಿನಿಂದ ಆಜ್ಞೆ ಸ್ವೀಕರಿಸುವ ನಿಟ್ಟಿನಲ್ಲಿ ನಾಲಗೆಯು ವಿಫಲವಾಗುತ್ತದೆ. ಅದು ನನ್ನನ್ನು ತಲ್ಲಣಗೊಳಿಸುತ್ತದೆ. ಹಲವೊಮ್ಮೆ ಬಿಕ್ಕಳಿಕೆ ಮರುಕಳಿಸುತ್ತದೆ. ಮಾತು ಸ್ವಲ್ಪವೂ ಸ್ಪಷ್ಟವಾಗುವುದಿಲ್ಲ. 'ಕಳೆದ 25 ವರ್ಷಗಳಿಂದ ನಾನು ದಿನ ನಿತ್ಯ ನಿದ್ದೆಯ ಗುಳಿಗೆ ಬಳಸುತ್ತಿದ್ದೆ. ಆದರೆ ಅದು ನನ್ನನ್ನು ಈ ದುರವಸ್ಥೆಗೆ ತಲುಪಿಸಬಹುದೆಂದು ನಾನು ಭಾವಿಸಿರಲಿಲ್ಲ' ಎಂದು ಆಕೆ ಸ್ವತಃ ಒಪ್ಪಿಕೊಂಡಿದ್ದಳು. ಆಕೆಗೆ ಜೀವನದಲ್ಲಿ ಮನಃ ಶಾಂತಿಯಿರಲಿಲ್ಲವೆಂಬುದು ವ್ಯಕ್ತ. ಹಣ ಮತ್ತು ಪ್ರಖ್ಯಾತಿಗಳಿಗೆ ಮನಃಶಾಂತಿ ನೀಡಲಾಗಿಲ್ಲವೆಂಬುದೇ ಈ ಅನುಭವಗಳ ಸಾರಾಂಶ.

ಪ್ರಾಯಶಃ ಮನಃಶಾಂತಿಗಾಗಿಯೇ ರಿಚಾರ್ಡ್ ಬರ್ಟನ್ ಆರು ಬಾರಿ ವಿವಾಹ ವಾಗಿರಬೇಕು. ಎರಡು ಬಾರಿ ಎಲಿಝಬೆತ್ ಟೈಲರ್‌ಳನ್ನೇ ವಿವಾಹವಾಗಿದ್ದ. ಅದೇ ವೇಳೆ ಎಲಿಝಬೆತ್ ಟೈಲರ್ ಎಂಟು ಬಾರಿ ವಿವಾಹವಾಗಿದ್ದಳು. ಆದರೆ ಇವರಿಬ್ಬರಿಗೂ ಶಾಂತಿ ನೆಮ್ಮದಿ ದೊರೆಯಲಿಲ್ಲ. 1972ರಲ್ಲಿ ರಸಾಯನ ಶಾಸ್ತ್ರದಲ್ಲಿ ನೋಬೆಲ್ ಪ್ರಶಸ್ತಿ ಗಳಿಸಿದ್ದ ಅಮೇರಿಕನ್ ವಿಜ್ಞಾನಿ ಸ್ಟ್ಯಾಂಡ್‌ಫೋರ್ಡ್ ಮೂರ್ 1982ರ ಆಗಸ್ಟ್‌ನಲ್ಲಿ ಆತ್ಮಹತ್ಯೆ ಮಾಡಿಕೊಂಡರು. ಪ್ರಖ್ಯಾತಿಯ ಕೊರತೆಯು ಅವರನ್ನು ಆತ್ಮಹತ್ಯೆಗೆ ಪ್ರೇರೇಪಿಸಿರಲಿಲ್ಲವಷ್ಟೆ.

ತಮಿಳಿನ ಜನಪ್ರಿಯ ಚಿತ್ರನಟ ಜೆಮಿನಿ ಗಣೇಶನ್ 1983ರ ಸೆಪ್ಟೆಂಬರ್ 30ರಂದು ಸ್ವತಃ ಗುಂಡು ಹಾರಿಸಿ ಆತ್ಮಹತ್ಯೆಗೆ ಪ್ರಯತ್ನಿಸಿದ್ದರು. ಹಣ ಅಥವಾ ಖ್ಯಾತಿಯ ಕೊರತೆಯು ಅದಕ್ಕೆ ಪ್ರೇರೇಪಿಸಿರಲಾರದಷ್ಟೆ.

ಸಿನೆಮಾ ಜಗತ್ತಿಗೆ ಗಮನಾರ್ಹ ಕೊಡುಗೆಗಳನ್ನು ನೀಡಿದ್ದ ಜಪಾನೀ ನಿರ್ದೇಶಕ ಜೂಸೋ ಇಟಾಮಿ ಏಳನೇ ಮಹಡಿಯಿಂದ ಹಾರಿ ಆತ್ಮಹತ್ಯೆ ಮಾಡಿದ್ದ. ಆತನಿಗೆ 26 ವಯಸ್ಸಿನ ಯುವತಿಯೊಂದಿಗೆ ಸಂಬಂಧವಿದೆಯೆಂದು ಜನರು ಆರೋಪಿಸಿದ್ದೇ ಕಾರಣವಾಗಿತ್ತು.

ನಟಿ ದಿವ್ಯಾ ಭಾರತಿಯು ಅಲ್ಪಾವಧಿಯಲ್ಲಿಯೇ ಬಹಳ ಪ್ರಸಿದ್ಧಳಾಗಿದ್ದಳು. 19ನೆಯ ವಯಸ್ಸಿನಲ್ಲಿ ತಾನು ವಾಸವಾಗಿದ್ದ ಫ್ಲ್ಯಾಟಿನಿಂದ ಕೆಳಗೆ ಬಿದ್ದು ಪ್ರಾಣ ಬಿಟ್ಟಿದ್ದಳು. ಅದು ಆತ್ಮಹತ್ಯೆ ಅಥವಾ ಕೊಲೆಯಾಗಿರಬಹುದೆಂಬ ಅಭಿಪ್ರಾಯವಿದೆ. ಒಂದು ವಿಷಯ ವಂತೂ ಖಚಿತ. ಅವರ ಕುಟುಂಬ ಜೀವನವು ಸುಖಮಯವಾಗಿರಲಿಲ್ಲ. ಹಿಂದೂವಾಗಿದ್ದ ದಿವ್ಯಭಾರತಿಯು ಓರ್ವ ಮುಸ್ಲಿಮನನ್ನು ವಿವಾಹವಾಗಿದ್ದಳು. ಆದ್ದರಿಂದ ಎರಡು ಮನೆಯವರಿಗೂ ಅವರ ಬಗ್ಗೆ ಅಸಮಾಧಾನವಿತ್ತು. ಆ ಬಳಿಕದ ಅವರ ಕುಟುಂಬ ಜೀವನವೂ ನೆಮ್ಮದಿದಾಯಕವಾಗಿರಲಿಲ್ಲ. ಪತಿಯೊಂದಿಗೆ ಆಗಾಗ್ಗೆ ಜಗಳವಾಗುತ್ತಿತ್ತು. ಮನೋವ್ಯಥೆಯ ನಿವಾರಣೆಗಾಗಿ ಮದ್ಯಕ್ಕೆ ಶರಣಾದಳು. ಮದ್ಯದ ಅಮಲಿನಿಂದ ಫ್ಲ್ಯಾಟಿನಿಂದ ಕೆಳಗೆ ಬಿದ್ದು ಸಾವಿಗೀಡಾದಳೆಂದೂ ಹೇಳಲಾಗುತ್ತಿದೆ. ಅತ್ಯಂತ ಸಂತೃಪ್ತವೆಂದು

ನಾವು ಭಾವಿಸುವ ಜೀವನ ಅತ್ಯಂತ ದುಃಖಮಯ. ಕೇವಲ ಹಣ ಮತ್ತು ಪ್ರಸಿದ್ಧಿಯಿಂದ ಮನಃಶಾಂತಿ ದೊರೆಯಲಸಾಧ್ಯವೆಂಬುದೇ ಇವುಗಳ ಸಂದೇಶವಲ್ಲವೇ?

ಹಣ, ಜನಪ್ರಿಯತೆ ಮತ್ತು ಆಧುನಿಕ ಸೌಲಭ್ಯಗಳಿಂದ ಮನಃಶಾಂತಿಯು 'ಆಚಾರ್ಯ' ರಜನೀಶ್‌ರಿಗೆ ದೊರೆಯಬೇಕಾಗಿತ್ತು. 'ಜಗತ್ತಿನಲ್ಲಿ ಯಾವುದೂ ನಿಷಿದ್ಧವೆಂಬುದಿಲ್ಲ. ನಿಯಂತ್ರಣವೇ ಅತಿದೊಡ್ಡ ಆಪತ್ತು, ಸೆಕ್ಸ್‌ನಲ್ಲಿ ದಿವ್ಯತ್ವವಿದೆ, ಅದರ ನೆರಳಲ್ಲಿ ದೇವನ ನೆರಳಿದೆ. ಅದರೊಂದಿಗೆ ವೈರ ಮನೋಭಾವ ಸಲ್ಲದು. ಮನಸ್ಸಿನ ಎಲ್ಲ ಕವಾಟಗಳನ್ನೂ ತೆರೆಯಿರಿ. ದಮನಿಸಲ್ಪಡುವ ಆಗ್ರಹಗಳು ವಿನಾಶಕ್ಕೆ ಸಾಗಿಸುತ್ತವೆ. ಲೈಂಗಿಕ ದಮನವು ವಿಮೋಚನೆಯ ಹಾದಿಯಲ್ಲ. ಲೈಂಗಿಕತೆಯ ಎಲ್ಲ ಕೋನಗಳನ್ನೂ ತಿಳಿಯಿರಿ. ಆ ಮೂಲಕ ಮಾತ್ರವೇ ವಿರಕ್ತಿ ಮತ್ತು ಮೋಕ್ಷ ಪ್ರಾಪ್ತವಾದೀತು. 'ಮೋಕ್ಷವೇ ಮುಕ್ತಿ, ಮುಕ್ತಿಯೇ ಆನಂದ'- ಇದು ರಜನೀಶರ ತತ್ವ ಸಿದ್ಧಾಂತವಾಗಿತ್ತು. ಇದರ ಪ್ರಚಾರಕ್ಕಾಗಿ ರಜನೀಶ್ ಅನೇಕ ಗ್ರಂಥಗಳನ್ನು ರಚಿಸಿದರು. ಒಂದು ಹೊಸ ಧರ್ಮವನ್ನೇ ಅವರು ಸ್ಥಾಪಿಸಿದರು. ಅವರ ಅನುಯಾಯಿಗಳು ನಗ್ನರಾಗಿ ಗಂಡು ಹೆಣ್ಣು ಸರ್ಪಗಳಂತೆ ರಜನೀಶ್‌ಪುರ ಎಂಬ ಆಶ್ರಮದಲ್ಲಿ ಸುತ್ತಿಕೊಂಡರು.

ಅವರ ಆಶ್ರಮವು 64,000 ಎಕ್ರೆ ವಿಸ್ತೀರ್ಣವಿರುವ ಸಂಪೂರ್ಣ ಹವಾನಿಯಂತ್ರಿತ ವ್ಯವಸ್ಥೆಯಿರುವ ಜಗತ್ತಿನ ಏಕೈಕ ಆಶ್ರಮವಾಗಿತ್ತು. ನಿಗೂಢತೆಯೇ ರಜನೀಶ್‌ಪುರದ ವೈಶಿಷ್ಟ್ಯವಾಗಿತ್ತು. ಸೇನಾ ಶಿಬಿರಗಳನ್ನು ಮೀರಿಸುವ ರೀತಿಯಲ್ಲಿ ಶಸ್ತ್ರಧಾರಿಗಳು, ಹೆಲಿಕಾಪ್ಟರ್‌ಗಳು, ನಾಲ್ಕು ವರ್ಷಗಳಲ್ಲಿ 2000 ಲಕ್ಷ ಡಾಲರ್ ವ್ಯಯಿಸಿ ಆಶ್ರಮವನ್ನು ನಿರ್ಮಿಸಲಾಗಿತ್ತು. ಅದರ ಸೌಲಭ್ಯವನ್ನು ಹೆಚ್ಚಿಸಲಿಕ್ಕಾಗಿ ಪ್ರತಿ ವರ್ಷ 100 ಲಕ್ಷ ಡಾಲರ್ ವ್ಯಯಿಸಲಾಯಿತು. ರಜನೀಶರ ಸ್ವಂತ ಬಳಕೆಗಾಗಿ 93 ರಾಲ್ಸ್‌ರಾಯ್ ಕಾರುಗಳು, ಅನೇಕ ರತ್ನ ಖಚಿತ ವಾಚುಗಳು, 6 ವಿಮಾನಗಳು, 20 ಲಕ್ಷ ಡಾಲರ್ ವೆಚ್ಚದಲ್ಲಿ ನಿರ್ಮಿಸಿದ ಈಜುಕೊಳ, ಕೇವಲ ಅವರೊಬ್ಬರಿಗೇ ನೋಡಲಿಕ್ಕಾಗಿ ಒಂದು ಸಿನಿಮಾ ಥಿಯೇಟರ್ ಅದರಲ್ಲಿತ್ತು. 6 ಅಂತಾರಾಷ್ಟ್ರೀಯ ಕಂಪೆನಿಗಳನ್ನು ಹೊಂದಿದ್ದ ಅವರಿಗೆ ವಿದೇಶಿಯರೂ ಸೇರಿ 5 ಲಕ್ಷ ಅನುಯಾಯಿಗಳಿದ್ದರಂತೆ. ರಜನೀಶ್‌ಪುರದ ಸೂತ್ರಧಾರನಾಗಿದ್ದ 'ಆಚಾರ್ಯ'ರ ಬಲಗೈ ಬಂಟ ಹಾಗೂ ಕಾರ್ಯದರ್ಶಿಯಾಗಿದ್ದ ಮಾ ಆನಂದಶೀಲ ಮತ್ತು 12 ಅನುಯಾಯಿಗಳು 1985ರ ಸೆಪ್ಟೆಂಬರ್‌ನಲ್ಲಿ ಅವರೊಂದಿಗೆ ಜಗಳಾಡಿದರು, 35 ಕೋಟಿ ಡಾಲರ್ ಸಹಿತ ಯುರೋಪಿಗೆ ಪರಾರಿಯಾದರು. ಅವರು ರಜನೀಶ್‌ರ ಕೊಲೆ ಸಂಚು ನಡೆಸಿದ್ದರಂತೆ! ಅಂದಿನಿಂದ ಅವರ ದುರ್ಗತಿ ಆರಂಭವಾಯಿತು. ತರುವಾಯ 'ರಜನೀಶಿಯನಿಝಮ್' ಎಂಬ ಧರ್ಮವನ್ನು ನಾನೇ ಅಂಗೀಕರಿಸುವುದಿಲ್ಲವೆಂದು ಸಾರಿ ತನ್ನ ತತ್ವಧಾರೆಯನ್ನು ಪ್ರತಿಪಾದಿಸುವ ಸುಮಾರು 4,000 ಗ್ರಂಥಗಳನ್ನು ಅವರು ಅಗ್ನಿಗಾಹುತಿ ಮಾಡಿದರು.

1985ರ ಅಕ್ಟೋಬರ್ 24ರಂದು ಅವರು ವಲಸೆ ನಿಯಮವನ್ನು ಉಲ್ಲಂಘಿಸಿದ್ದಕ್ಕಾಗಿ ಪೋರ್ಟ್‌ಲ್ಯಾಂಡ್ ನ್ಯಾಯಾಲಯವು ಅಪರಾಧಿಯೆಂದು ತೀರ್ಪು ನೀಡಿತು. ರಜನೀಶ್ ಮತ್ತು

ಕೆಲವು ನಿಕಟ ಅನುಯಾಯಿಗಳು ಎರಡು ಜೆಟ್ ವಿಮಾನಗಳಲ್ಲಿ ಪಾರಾಗಲು ಪ್ರಯತ್ನಿಸಿದಾಗ ಪೋರ್ಟ್‌ಲ್ಯಾಂಡ್‌ನಲ್ಲಿ ಅಮೇರಿಕನ್ ಅಧಿಕಾರಿಗಳು ಅವರನ್ನು ಬಂಧಿಸಿ ಜೈಲಿಗೆ ಹಾಕಿದರು. 'ಬಂಧನ'ಗಳಿಲ್ಲದ ಜಗತ್ತಿನ ಪ್ರಾಯೋಜಕರಾಗಿದ್ದ 'ದೇವಮಾನವ'ನನ್ನು ಜೈಲಿನಲ್ಲಿ ಕೈಗಳಿಗೆ ಕೋಳ ಮತ್ತು ಕಾಲುಗಳನ್ನು ಸರಪಳಿಗಳಿಂದ ಬಂಧಿಸಿ ಜೈಲಿನಲ್ಲಿರಿಸಲಾಗಿತ್ತು. 12 ದಿನಗಳ ಜೈಲುವಾಸದಲ್ಲಿ 12 ಕಿಲೋ ಭಾರ ಕಳೆದುಕೊಂಡ ರಜನೀಶ್, ಆರಂಭದಲ್ಲಿ ಅಪರಾಧವನ್ನು ನಿರಾಕರಿಸಿದರೂ ಗತ್ಯಂತರವಿಲ್ಲವೆಂದು ಮನಗಂಡಾಗ ಒಪ್ಪಿಕೊಳ್ಳಬೇಕಾಯಿತು. 50 ಲಕ್ಷ ಡಾಲರ್ ದಂಡ ಮತ್ತು 10 ವರ್ಷಗಳ ಕಠಿಣ ಸಜೆ ವಿಧಿಸಲಾಯಿತು. ಆದರೆ 5 ದಿನಗಳಲ್ಲಿ ಅಮೇರಿಕ ತೊರೆಯುವುದಿದ್ದರೆ ಜೈಲು ಶಿಕ್ಷೆಯನ್ನು ವಿನಾಯಿತಿಗೊಳಿಸಬಹುದೆಂಬ ಶರತ್ತಿನಲ್ಲಿ ಅವರು ಅಮೇರಿಕ ತೊರೆದು ಭಾರತಕ್ಕೆ ಮರಳಿದರು. ಇಲ್ಲಿಯೂ ಉಳಿಗಾಲವಿಲ್ಲವೆಂದು ಮನಗಂಡ ರಜನೀಶ್, ಉರುಗ್ವೆಯಲ್ಲಿ ವಾಸ ಹೂಡಿದರು. ಆದರೆ ಅಲ್ಲಿನ ಸರಕಾರವೂ ಅವರನ್ನೂ 20 ಅನುಯಾಯಿಗಳನ್ನೂ ಹೊರಹಾಕುವ ಕ್ರಮ ಕೈಗೊಳ್ಳಬೇಕಾಯಿತು. ಅವರಿಗೆ ಮತ್ತು ಅನುಯಾಯಿಗಳಿಗೆ ಒಂದು ಶಾಲೆ ನಡೆಸುವ ಅನುಮತಿಯನ್ನೂ ಸರಕಾರ ನೀಡಲಿಲ್ಲ. ಎಲ್ಲರಿಂದಲೂ ತಿರಸ್ಕೃತರಾಗಿ ಕೊನೆಗೆ ರಜನೀಶ್‌ರ ಅಂತ್ಯವಾಯಿತು. ನೋಡಿದಿರಾ, ಸುಖದ ವಾಗ್ದಾನ ನೀಡಿದ 'ಭಗವಾನ್'ನ ದುರ್ಗತಿ!!

ಆನಂದ ಮೂರ್ತಿಯು ಇನ್ನೋರ್ವ ಯೋಗಿಯಾಗಿದ್ದಾರೆ. ಅವರು ಶಿವನ ಮೂರನೆ ಅವತಾರ, ಅಲ್ಲ ಅವರೇ ನೈಜ ದೇವರೆಂದು ನಂಬುವ ಮತ್ತು ಅದನ್ನು ಪ್ರಚಾರ ಮಾಡುವ ಅವರ 60 ಲಕ್ಷ ಅನುಯಾಯಿಗಳು ಜಗತ್ತಿನಾದ್ಯಂತ ಹರಡಿಕೊಂಡಿದ್ದಾರೆ. ಅನುಯಾಯಿಗಳು ಬಹಳ ಸರಳ ಜೀವನ ಸಾಗಿಸುತ್ತಾರೆ. ಆದರೆ, ಮೂರ್ತಿಯ ಜೀವನವು ವೈಭವೋಪೇತವಾಗಿತ್ತು. ಮಲಗುವ ಕೋಣೆ ಮತ್ತು ವಾಹನಗಳೆಲ್ಲವೂ ಹವಾನಿಯಂತ್ರಿತವಾಗಿದ್ದುವು. ಅವರು ಅತ್ಯುತ್ತಮ ಭಕ್ಷ್ಯ ಪದಾರ್ಥಗಳನ್ನು ಸೇವಿಸುವ ಮತ್ತು ಬೆಲೆಬಾಳುವ ಉಡುಪುಗಳನ್ನು ಧರಿಸುವ ಯೋಗಿಯಾಗಿದ್ದರು.

1955ರಲ್ಲಿ ಅವರು ಸ್ಥಾಪಿಸಿದ ಮತವು 1970ರ ತನಕ ಅತಿಯಾಗಿ ಬೆಳೆಯಿತು. ಹಾಗಿದ್ದರೂ 1970 ಅಕ್ಟೋಬರ್ 1ರಂದು ಅವರಿಗೂ ಪತ್ನಿ ಉಮಾಶಂಕರ್‌ಳಿಗೂ ಜಗಳ ವಾಯಿತು. ಪಾಟ್ನಾ ಸೆಶನ್ ನ್ಯಾಯಾಲಯದಲ್ಲಿ ಆಕೆಯು ಸ್ವಾಮಿಯ ಹೆಸರಲ್ಲಿ ಕೊಲೆ ಅಪರಾಧಕ್ಕೆ ಸಾಕ್ಷ್ಯ ನೀಡಿದಳು. ಆನಂದ ಮೂರ್ತಿಯು ಸಲಿಂಗ ಕಾಮಿಯೆಂದು ಆಕೆ ಬಹಿರಂಗವಾಗಿ ಹೇಳಿದಳು. ಆನಂದ ಮೂರ್ತಿ ಹಾಗೂ ನಾಲ್ಕು ಅನುಯಾಯಿಗಳ ಮೇಲೆ 1971 ಡಿಸೆಂಬರ್ 29ರಂದು ಕೊಲೆ ಆರೋಪ ಹೊರಿಸಿ ಜೀವಾವಧಿ ಜೈಲು ಶಿಕ್ಷೆ ವಿಧಿಸಲಾಯಿತು. 1976 ಜನವರಿ 4ರ ತನಕ ಈ 'ದೇವಮಾನವ' ಜೈಲಿನಲ್ಲಿರಬೇಕಾಯಿತು. ಭಾರತದ ಪ್ರಖ್ಯಾತ ನ್ಯಾಯವಾದಿಗಳಾದ ಅಶೋಕ್‌ಸೇನ್, ಶಂಕರ್‌ದಾಸ್ ಬ್ಯಾನರ್ಜಿ, ನಾಗೇಶ್ ಪ್ರಸಾದ್ ಮತ್ತು ರಾಮ್ ಜೇಠ್ಮಲಾನಿಯವರನ್ನು ನೇಮಿಸಿ ನಡೆಸಿದ ಕಾನೂನು

ಹೋರಾಟದಿಂದಾಗಿ ಜೈಲಿನಿಂದ ಹೊರಬರಲು ಸಾಧ್ಯವಾಯಿತು. ಒಂದೆಡೆಯಲ್ಲಿ ಸರಕಾರ, ಇನ್ನೊಂದೆಡೆಯಲ್ಲಿ ಮಾರ್ಕಿಸ್ಟರ ಬೆದರಿಕೆಗೆ ಸಿಲುಕಿ ಅವರು ತೊಳಲಾಡಬೇಕಾಯಿತು.

ದಕ್ಷಿಣ ಆಫ್ರಿಕಾದ ಅಧ್ಯಕ್ಷ ನೆಲ್ಸನ್ ಮಂಡೇಲರು ಪ್ರಥಮ ಪತ್ನಿ ಎವಿಲಿನ್ ಮತ್ತು ಎರಡನೆ ಪತ್ನಿ ವಿನ್ನಿಗೆ ವಿವಾಹ ವಿಚ್ಛೇದನ ನೀಡಿದರು. ವಿನ್ನಿ ಪ್ರಿಯಕರನಿಗೆ ಕಳುಹಿಸಿದ್ದ ಪತ್ರವೊಂದನ್ನು ಓರ್ವ ಪತ್ರಿಕಾ ಸಂಪಾದಕ ಮಂಡೇಲರಿಗೆ ತೋರಿಸಿದನಂತೆ. ತನ್ನ ದಾಂಪತ್ಯ ಜೀವನವು ಅತ್ಯಂತ ಕಹಿಯಾಗಿತ್ತೆಂದು ಮಂಡೇಲರೇ ನ್ಯಾಯಾಲಯದಲ್ಲಿ ಬಹಿರಂಗ ಪಡಿಸಿದರು. ನ್ಯಾಯಾಲಯವು ವಿವಾಹ ವಿಚ್ಛೇದನಕ್ಕೆ ಅನುಮತಿಸಿತು. ಅನಂತರ ವಿನ್ನಿಯು ತನ್ನ ಪ್ರಿಯಕರನ ಜತೆಯಲ್ಲಿ ಕಾರಿನಲ್ಲಿ ಮರಳಿ ಹೋಗಿದ್ದಳು. ಮಂಡೇಲ ಅನಂತರ 50 ವಯಸ್ಸಿನ ಗ್ರೇಕ್‌ಳನ್ನು ವಿವಾಹವಾದರು. ಆಕೆಯೊಂದಿಗಿನ ಗುಪ್ತ ಸಂಬಂಧವನ್ನು ಮಂಡೇಲರು ಹಲವು ಕಾಲ ಅಡಗಿಸಿದ್ದರಂತೆ.

ಅಮೇರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್‌ರ ಲೈಂಗಿಕ ಅಪವಾದದ ಕಥೆಗಳು ಮತ್ತು ಆ ಬಳಿಕದ ವಿಚಾರಣೆಯ ಬಗ್ಗೆ ಪುಟ್ಟ ಮಕ್ಕಳಿಗೂ ತಿಳಿದಿದೆ. ಈ ಎಲ್ಲ ಅಪವಾದಗಳಿದ್ದರೂ ಅವುಗಳನ್ನು ಕ್ಲಿಂಟನ್ ಸ್ವತಃ ಒಪ್ಪಿಕೊಂಡರೂ ಕ್ಲಿಂಟನ್‌ರ ಪತ್ನಿ ಹಿಲರಿಗೆ ಯಾವುದೇ ಆಕ್ಷೇಪವಿಲ್ಲ. ಅವರು ಕ್ಲಿಂಟನ್‌ರ ಪರವಾಗಿ ವಾದಿಸಿದರು.

ಸಮಾನ ವ್ಯಕ್ತಿತ್ವವಿರುವವರ ಪರಸ್ಪರ ವಿವಾಹ ಸಂಬಂಧವು ಬಹಳ ಸಂತೃಪ್ತ ಮತ್ತು ಶಾಂತಿಯುತವಾಗಿರುವುದೆಂದು ಕೆಲವರು ಭಾವಿಸುತ್ತಾರೆ. ಆದರೆ ಪತಿಪತ್ನಿಯರು ಐಎಎಸ್ ಅಧಿಕಾರಿಗಳಾಗಿದ್ದರೂ ಅವರ ಕುಟುಂಬ ಜೀವನ ವಿಫಲವಾಗಿರುವುದು ನಮಗೆ ತಿಳಿದಿದೆ. ಪತಿ - ಪತ್ನಿಯರೀರ್ವರೂ ಸಚಿವರಾಗಿದ್ದೂ ಪ್ರತ್ಯೇಕ ಬಂಗ್ಲೆಗಳಲ್ಲಿ ವಾಸಿಸಿ ಪರಸ್ಪರ ಮಾತಾಡದ ಉದಾಹರಣೆಯೂ ಇವೆ. ಪತಿ ಮತ್ತು ಪತ್ನಿಯು ಪ್ರಖ್ಯಾತ ಸಾಹಿತಿಗಳಾಗಿದ್ದೂ ಅವರ ಸಂಬಂಧವು ವಿವಾಹ ವಿಚ್ಛೇದನದಲ್ಲಿ ಮುಕ್ತಾಯಗೊಂಡಿತ್ತು. ಈ ಹಿನ್ನಲೆಯಲ್ಲಿ ವಿವಾಹದ ಕುರಿತು ಕುರ್‌ಆನ್ ಏನು ಹೇಳಿದೆಯೆಂದು ನೋಡೋಣ:

**"ಅವನು ನಿಮಗಾಗಿ ನಿಮ್ಮ ವರ್ಗದಿಂದಲೇ ಜೋಡಿಗಳನ್ನು ಸೃಷ್ಟಿಸಿ, ನೀವು ಅವರ ಬಳಿ ಪ್ರಶಾಂತಿಯನ್ನು ಪಡೆಯುವಂತೆ ಮಾಡಿದುದು ಮತ್ತು ನಿಮ್ಮ ನಡುವೆ ಪ್ರೇಮ ಮತ್ತು ಅನುಕಂಪವನ್ನುಂಟು ಮಾಡಿದುದೂ ಅವನ ನಿದರ್ಶನಗಳಲ್ಲೊಂದಾಗಿದೆ. ನಿಶ್ಚಯ ವಾಗಿಯೂ ವಿವೇಚಿಸುವವರಿಗೆ ಇದರಲ್ಲಿ ಅನೇಕ ನಿದರ್ಶನಗಳಿವೆ."**

**(ಪವಿತ್ರ ಕುರ್‌ಆನ್, 30:21)**

ವಿವಾಹಸಂಬಂಧದಿಂದ ನಮಗೆ ಶಾಂತಿ ನೆಮ್ಮದಿ ದೊರೆಯುವುದೆಂದು ಈ ವಚನದಲ್ಲಿ ತಿಳಿಸಲಾಗಿದೆ. ಮೇಲೆ ವಿವರಿಸಿರುವವರಿಗೆ ಅದು ದೊರೆತಿಲ್ಲವೆಂದಾದರೆ ಅವರ ಜೀವನದಲ್ಲಿ ಎಲ್ಲಿಯೋ ದೋಷವಿದೆಯೆಂಬುದು ವ್ಯಕ್ತ.

ೞಃೞ

# ತಲ್ಲಣಗೊಳಿಸುವ ಅಂಕಿ ಅಂಶಗಳು

ಅಮೇರಿಕ ಮತ್ತು ಯೂರೋಪುಗಳು ಅತ್ಯಾಧುನಿಕ ಸೌಲಭ್ಯಗಳಿರುವ ರಾಷ್ಟ್ರಗಳಾಗಿವೆಯಷ್ಟೆ. ಆದರೆ ಅಲ್ಲಿನ ಜನರ ಜೀವನ ಹೇಗಿದೆ?

1925ರಲ್ಲಿ ಖ್ಯಾತ ಕವಿ ಖಲೀಲ್ ಜಿಬ್ರಾನ್ ಅಮೇರಿಕದಲ್ಲಿ ಹೋಗಿ ನೆಲೆಸಿದಾಗ ಅಂದಿನ ಪ್ರಖ್ಯಾತ ನಿರೂಪಕಿ ಮೆಸಿಯಾದ್‌ಳಿಗೆ ಹೀಗೆ ಪತ್ರ ಬರೆದಿದ್ದರು:

"ಪ್ರಿಯ ಮೆಸಿಯಾದ್,

ನನ್ನ ಜೀವನದ ಭಾಗ್ಯ ದೌರ್ಭಾಗ್ಯಗಳ ಬಗ್ಗೆ ನಾನು ಏನೆಂದು ಹೇಳಲಿ! ಒಂದು ವರ್ಷದ ಹಿಂದೆ ನಾನು ಶಾಂತ ಮತ್ತು ಏಕಾಂತವಾಗಿ ಬಾಳುತ್ತಿದ್ದೆ. ಇಂದು ನನ್ನ ಏಕಾಂತತೆಯು ಶಬ್ದ ಕೋಲಾಹಲಗಳಿಂದ ತುಂಬಿದೆ. ನನ್ನ ಹಗಲು ಮತ್ತು ರಾತ್ರಿಗಳನ್ನು ಜನರು ನುಂಗುತ್ತಿದ್ದಾರೆ. ಆಶೆ, ಅಭಿಲಾಷೆ ಮತ್ತು ಒತ್ತಡಗಳು ನನ್ನ ಜೀವನವನ್ನು ಮುಳುಗಿಸುತ್ತಿದೆ. ಮಾನವನಿಂದಲೂ ನನ್ನ ನೆರಳಿನಿಂದಲೂ ಪಾರಾಗಿ ಯಾವುದಾದರೂ ಹಳ್ಳಿಗೆ ಓಡಿಹೋಗಬೇಕೆಂದು ಆಗ್ರಹಿಸುತ್ತಿದ್ದೇನೆ."

ಈ ಬಯಕೆಯ ಸಾಫಲ್ಯಕ್ಕಾಗಿಯೇ ಪಾಶ್ಚಾತ್ಯ ರಾಷ್ಟ್ರಗಳಿಂದ ಶ್ರೀಮಂತರ ಮಕ್ಕಳು ಭಾರತದ ಭಕ್ತಿ ಕೇಂದ್ರಗಳಲ್ಲಿ ಅಲೆದಾಡಿ ಆತ್ಮ ಸಂತೃಪ್ತಿ ಪಡೆಯುತ್ತಿದ್ದಾರೆ.

ಅಮೇರಿಕದಲ್ಲಿ ಸರಾಸರಿ 24 ನಿಮಿಷಗಳಲ್ಲಿ ಒಂದು ಕೊಲೆಪಾತಕ, 7 ನಿಮಿಷಗಳಲ್ಲಿ ಓರ್ವ ಮಹಿಳೆಯ ಅಪಹರಣ, 10 ಸೆಕೆಂಡುಗಳಲ್ಲಿ ಮಾರಕಾಸ್ತ್ರಗಳಿಂದ ಒಂದು ಆಕ್ರಮಣ ನಡೆಯುತ್ತಿದೆ. 73-79ರ ಅವಧಿಯಲ್ಲಿ ದರೋಡೆಗಳು 13.7% ವೃದ್ಧಿ ಸಾಧಿಸಿತ್ತು. 1980ರಲ್ಲಿ ದರೋಡೆಗಳು ಹಿಂದಿನ ವರ್ಷಗಳಿಗಿಂತ 60% ಹೆಚ್ಚಿತ್ತು. ಪ್ರತಿ 4 ಸೆಕೆಂಡುಗಳಲ್ಲಿ ಒಂದು ಅಪರಾಧ ಕೃತ್ಯ ಅಲ್ಲಿ ನಡೆಯುತ್ತಿದೆ. ಹೂಸ್ಟನ್ ನಗರದ ಓರ್ವ ಪೊಲೀಸ್ ಅಧಿಕಾರಿಯು ಹೀಗೆ ಹೇಳಿದ್ದಾರೆ: ನಾವು ಕೆಲವರು ಸೇತುವೆಗಳಲ್ಲಿ ಬದುಕಿ ಮನೆಗಳ ಬಾಗಿಲುಗಳಿಗೆ ಜಡಿದಿರುವ ಬೀಗಗಳ ಕೆಳಗೆ ನಿದ್ರಿಸುತ್ತೇವೆ. ಎಚ್ಚರಿಕೆಯ ಗಂಟೆಯನ್ನು ಸಿದ್ಧಪಡಿಸಿ ತಲೆದಿಂಬಿನಡಿಯಲ್ಲಿ ಕೋವಿಗಳನ್ನು ತುಂಬಿಸಿಟ್ಟ ಬಳಿಕ ನಾವು ಸ್ವಲ್ಪ ವಿಶ್ರಾಂತಿಗಾಗಿ ಪ್ರಯತ್ನಿಸುತ್ತೇವೆ. ಇದು ಹಾಸ್ಯಾಸ್ಪದವಾಗಿದೆ. ಪ್ರಾಣಿಗಳಂತೆ ಜೀವನದ ಪ್ರತಿಯೊಂದು ಚಲನೆಯಲ್ಲಿಯೂ ಎಚ್ಚರವಹಿಸುವಂತೆ ನಮ್ಮನ್ನು ನಾವೇ ನಿರ್ಬಂಧಿಸುತ್ತಿದ್ದೇವೆ.

ಮತ್ತೋರ್ವ ಉನ್ನತಾಧಿಕಾರಿ ಹೇಳುತ್ತಾರೆ: "ನಾಲ್ಕೈದು ವರ್ಷಗಳಲ್ಲಿ ಅಮೇರಿಕದ ಪ್ರತಿಯೊಂದು ಮನೆಯೂ ಕನಿಷ್ಠಪಕ್ಷ ಒಂದು ಅಪರಾಧ ಕೃತ್ಯವನ್ನು ಎದುರಿಸಬೇಕಾದೀತು."

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವಿವಾಹವು ನಮ್ಮ ರಾಷ್ಟ್ರದಲ್ಲಿರುವಂತಿಲ್ಲ. ವಿವಾಹ ಪ್ರಾಯಕ್ಕೆ ತಲುಪಿದರೆ ಯುವತಿಯು ಓರ್ವ ಬಾಯ್ ಫ್ರೆಂಡನ್ನು (Boy friend) ಕಂಡುಹಿಡಿಯಬೇಕು. ಯುವಕನು ಗರ್ಲ್ ಫ್ರೆಂಡನ್ನು(Girl friend) ಆರಿಸಿಕೊಳ್ಳಬೇಕು. ಅನಂತರ ಅವರು ಸ್ವಲ್ಪಕಾಲ ಒಟ್ಟಿಗೆ ಬಾಳಬೇಕು. ವಿವಾಹವಾದರೆ ತಮ್ಮ ಸ್ವಂತ ಕಾಲಿನಲ್ಲಿ ನಿಲ್ಲುವ ಸಾಧ್ಯವಿದೆಯೇ ಎಂದು ಇಬ್ಬರೂ ಪರೀಕ್ಷಿಸಬೇಕು. ಈ ಪರೀಕ್ಷೆಯಲ್ಲಿ ಯಶಸ್ವಿಯಾಗದಿದ್ದರೆ ಬಹಳ ಸಂತೋಷದಿಂದ ಇಬ್ಬರೂ ಬೇರ್ಪಡಬಹುದು. ಇಬ್ಬರಿಗೂ ಎಲ್ಲ ವಿಷಯಗಳಲ್ಲಿಯೂ ಹೊಂದಿಕೊಳ್ಳಬಹುದೆಂದು ಖಾತ್ರಿಯಾದರೆ ಮಾತ್ರ ವಿವಾಹಕ್ಕೆ ಸಮ್ಮತಿಸಲಾಗುವುದು. ಬ್ರಿಟನ್‌ನಲ್ಲಾದರೋ ಹೆಚ್ಚಿನ ಯುವತಿಯರಿಗೆ ವಿವಾಹದ ಬಳಿಕ ಕುಟುಂಬ ಜೀವನಕ್ಕೆ ಸೀಮಿತವಾಗಿರುವ ಆಸಕ್ತಿಯಿಲ್ಲ... ಇಂಥ ವಿವಾಹಗಳು ಎಷ್ಟು ಸುಭದ್ರವಾದೀತು ಅಥವಾ ಅದರಿಂದ ಎಂತಹ ಸಂತೋಷ ಮತ್ತು ಸಂತೃಪ್ತಿ ದೊರೆಯ ಬಹುದೆಂದು ನಮಗೆ ಅರ್ಥವಾಗುವುದಿಲ್ಲವೇ?

ಆದರೆ ಅನೇಕ ಅಮೇರಿಕನ್ ದಂಪತಿಗಳ ಅಭಿಪ್ರಾಯದಲ್ಲಿ ವಿವಾಹವು ನರಕದ ಬಾಗಿಲನ್ನು ತೆರೆಯುತ್ತದೆ. ಪತ್ರಕರ್ತರಾದ ಡಾ| ಜಾಯ್ಸ್ ಬ್ರದರ್ಸ್ ನಡೆಸಿದ ಅಧ್ಯಯನದಲ್ಲಿ ಸ್ವಾರಸ್ಯಕರವಾದ ಕೆಲವು ಅಭಿಪ್ರಾಯಗಳು ವ್ಯಕ್ತವಾಗಿವೆ. "ಅಮೇರಿಕದ ವಿವಾಹಗಳ ಪೈಕಿ 12ರಲ್ಲಿ 4 ವಿವಾಹ ವಿಚ್ಛೇದನದಲ್ಲಿ ಮುಕ್ತಾಯವಾಗುತ್ತದೆ. ಉಳಿದ ಎಂಟರಲ್ಲಿ ಆರು ಸಂಬಂಧಗಳು ಹದಗೆಟ್ಟಿರುತ್ತದೆ. ಆದರೆ ಇತರ ಕೆಲವು ಅನುಕೂಲತೆಗಳಿಗಾಗಿ ಅವರು ಬೇರ್ಪಡುವುದಿಲ್ಲ. ಹನ್ನೆರಡು ಮಂದಿಯಲ್ಲಿ ಕೇವಲ ಇಬ್ಬರಿಗೆ ಮಾತ್ರ ಸಂತೃಪ್ತ ಕುಟುಂಬ ಜೀವನ ಪ್ರಾಪ್ತವಾಗುತ್ತದೆಯೆಂದು ಇದರಿಂದ ತಿಳಿಯಬಹುದು.

ಕೆಲ ವರ್ಷಗಳ ಹಿಂದೆ ದೈನಿಕವೊಂದರಲ್ಲಿ ಅಮೇರಿಕದಲ್ಲಿ ನಡೆಯುವ ಪತ್ನಿ ಪೀಡನೆಯ ಕುರಿತು ವರದಿ ಪ್ರಕಟವಾಗಿತ್ತು. ಪತ್ನಿ ಪೀಡನೆಯು ಅಮೇರಿಕನ್ ಸಮೂಹದ ಮಾರಕ ರೋಗವಾಗಿ ಮಾರ್ಪಟ್ಟಿದೆಯೆಂದು ಅದರಲ್ಲಿ ಸೂಚಿಸಲಾಗಿತ್ತು. ಉನ್ನತ ಪೊಲೀಸ್ ಅಧಿಕಾರಿಯಾಗಿದ್ದ ಜೋನ್ ಫೆಡರ್ಸ್ ಹದಿನೆಂಟು ವರ್ಷಗಳಿಂದ ಪತ್ನಿಯನ್ನು ಪೀಡಿಸಿದ ಕಥೆಗಳು ಅಲ್ಲಿ ಕೋಲಾಹಲವೆಬ್ಬಿಸಿತು. ಐದು ಮಕ್ಕಳ ಎದುರಲ್ಲಿ ಆತ ಪತ್ನಿಯನ್ನು ಪೀಡಿಸುತ್ತಿದ್ದ. ಶ್ವೇತ ಭವನದ ಗಣ್ಯರಿಗೆ ಈ ವಿಷಯ ತಿಳಿದಿದ್ದರೂ ಫೆಡರ್ಸ್‌ನ ಕಾರ್ಯ ವ್ಯಾಪ್ತಿಯಿಂದಾಗಿ ಅವರು ಈ ವಿಷಯವನ್ನು ಪರಿಗಣಿಸಲಿಲ್ಲ. ಕೊನೆಗೆ 41ವಯಸ್ಸಿನ ಪತ್ನಿಯು ಅಧ್ಯಕ್ಷ ರೇಗನ್‌ರಿಗೆ ನೇರವಾಗಿ ಪತ್ರ ಬರೆದಳು. ಆ ಬಳಿಕ ಸಮಸ್ಯೆಯು ಜನರ ಗಮನ ಸೆಳೆಯಿತು. ತರುವಾಯ ಅನೇಕ ಪತ್ನಿ ಪೀಡಕರ ಸುದ್ದಿಯು ಪತ್ರಿಕೆಗಳಲ್ಲಿ ಪ್ರಕಟವಾಯಿತು. ಅಮೇರಿಕನ್ ಸಮೂಹದ ಅಸಂತೃಪ್ತಿ ಮತ್ತು ರೋಷವೇ ಮರ್ದನಕ್ಕೆ ಕಾರಣವೆಂದು ಮನೋಶಾಸ್ತ್ರಜ್ಞರು ಹೇಳುತ್ತಾರೆ.

ಕಮ್ಯೂನಿಸ್ಟ್ ಸ್ವರ್ಗವಾಗಿದ್ದ ಸೋವಿಯಟ್ ಯೂನಿಯನ್‌ನ ಅವಸ್ಥೆ ಹೇಗಿತ್ತು? ಈಗ ಸ್ವತಂತ್ರ ರಾಷ್ಟ್ರಗಳಾಗಿ ಮಾರ್ಪಟ್ಟಿರುವ ಹಳೆಯ ಸೋವಿಯಟ್ ಯೂನಿಯನ್‌ನ ವಿವಿಧ ಗಣತಂತ್ರಗಳಲ್ಲಿ ಅಪ್ರಾಪ್ತ ವಯಸ್ಸಿನ ತಾಯಂದಿರ ಮತ್ತು ಮಕ್ಕಳ ತಂದೆಯಂದಿರ ಸಂಖ್ಯೆ ಕಳವಳಕಾರಿಯಾಗಿ ಹೆಚ್ಚುತ್ತಿದೆ. ಇದು ಅತ್ಯಂತ ಗಂಭೀರ ಸಮಸ್ಯೆಯಾಗಿದೆ. ಈ ಪರಿಣಾಮಕ್ಕೆ ಸರಕಾರವೇ ಕಾರಣವಾಗಿದೆ. ಅಲ್ಲಿ $^1/_3$ ವಿವಾಹಗಳು ನ್ಯಾಯಾಲಯಕ್ಕೆ ತಲುಪುತ್ತಿವೆ. ಚೀನಾದಲ್ಲಿ ಕೆಲವಾರು ವರ್ಷಗಳ ಹಿಂದೆ, ನಾಲ್ಕು ವರ್ಷಗಳಲ್ಲಿ ಕೇವಲ ಒಂದೇ ಪ್ರದೇಶದಲ್ಲಿ 25,000 ಮಂದಿ ಆತ್ಮಹತ್ಯೆ ಮಾಡಿಕೊಂಡಿದ್ದರು. ನೈತಿಕ ಅಧಃಪತನ ಮತ್ತು ಪೀಳಿಗೆಗಳ ಪರಸ್ಪರ ಘರ್ಷಣೆಯೇ ಇದಕ್ಕೆ ಪ್ರಧಾನ ಕಾರಣವೆಂದು ಹೇಳಲಾಗುತ್ತಿದೆ. ಆತ್ಮಹತ್ಯೆ ಮಾಡಿಕೊಂಡವರಲ್ಲಿ 80% ಎಳೆ ಪ್ರಾಯದವರು. ಹೆಚ್ಚಿನವರು ಮಹಿಳೆಯರು.

ಬ್ರಿಟನ್‌ನ ಸ್ಥಿತಿಯೂ ಭಿನ್ನವಾಗಿಲ್ಲ. ಇಂಗ್ಲೆಂಡಿನಿಂದ ಆಗಮಿಸಿದ್ದ ಈರ್ವರು ಹುಡುಗಿಯರು 'ಯುವ ಜೀವನ: ಪೂರ್ವ ಮತ್ತು ಪಶ್ಚಿಮದಲ್ಲಿ' ಎಂಬ ವಿಷಯದ ಕುರಿತು ಚರ್ಚಿಸಿದಾಗ ಅಲ್ಲಿನ ಹುಡುಗಿಯರ ಜೀವನದ ಕುರಿತು ಹೀಗೆ ಹೇಳಿದ್ದರು. "ಇಂಗ್ಲೆಂಡಿನಲ್ಲಿಯೂ ಇತರ ಹೆಚ್ಚಿನ ಪಾಶ್ಚಾತ್ಯ ರಾಷ್ಟ್ರಗಳಲ್ಲಿಯೂ ಹುಡುಗಿಯರು ಹೆಚ್ಚು ಸ್ವತಂತ್ರರಾಗಿದ್ದಾರೆ. ಹದಿಮೂರು ವಯಸ್ಸಿನ ಬಳಿಕ ಅವರು ಸಮಾಜದಲ್ಲಿ ಮುಕ್ತವಾಗಿ ಬೆರೆಯುತ್ತಾರೆ. ಒಂಟಿಯಾಗಿ ಪ್ರಯಾಣಿಸುತ್ತಾರೆ. ಹದಿನಾರನೆ ವಯಸ್ಸಿನಲ್ಲಿ ನಾನು ಟ್ರೈನ್‌ನಲ್ಲಿ ಸಂಚರಿಸಿ ಇಡೀ ಫ್ರಾನ್ಸನ್ನು ನೋಡಿದೆ. ನಮ್ಮ ಸೌಹಾರ್ದಕ್ಕೆ ಲೈಂಗಿಕತೆಯ ಬಣ್ಣವಿಲ್ಲ. ಡೇಟಿಂಗ್ ಮತ್ತು ಪರಸ್ಪರ ಸಾಮಿಪ್ಯಕ್ಕೆ ಆದ್ಯತೆ. ಚುಂಬನ ಮತ್ತು ಆಲಿಂಗನ ತೀರಾ ಸಾಮಾನ್ಯವಾದುದಾಗಿದೆ. ಈಗ ಪ್ರಾಯೋಗಿಕ ವಿವಾಹ(Trial Marriage) ಮತ್ತು ಸಹ ಶಯನವು(Cohabitation) ಸರ್ವಸಾಮಾನ್ಯವಾಗಿದೆ. ಇಂತಹ ಸಂಬಂಧಗಳಲ್ಲಿ ಹೆಣ್ಣು ಗರ್ಭವತಿಯಾಗಿ, ಗಂಡು ತೊರೆದು ಹೋದರೆ ಅವರು ಗರ್ಭಪಾತ ನಡೆಸಬಹುದು. ಅದಕ್ಕಾಗಿ ಸಮಾಜವು ಮುಖ ಸಿಂಡರಿಸುವುದಿಲ್ಲ". ನಗ್ನರಾಗಿ ಶೋಪಿಂಗ್ ನಡೆಸುವುದಕ್ಕೆ ಅತಿದೊಡ್ಡ ಸೂಪರ್ ಮಾರ್ಕೆಟ್‌ಗ್ರೂಪ್ ತೀರ್ಮಾನಿಸಿದೆಯಂತೆ. ಕೇವಲ ವಸ್ತ್ರಧರಿಸದವರಿಗೆ ನಗ್ನಸ್ನಾನದ ಅನುಮತಿಯಿರುವ ದಕ್ಷಿಣ ತೀರದ ಬೀಚಿನ ಸಮೀಪ ಹೊಸ ಅಂಗಡಿ ತೆರೆಯಲಾಗುವುದಂತೆ. ಪ್ರಾಯಶಃ ಈ ಸನ್ನಿವೇಶದಿಂದಾಗಿಯೇ ಬ್ರಿಟನ್‌ನ ವೈದ್ಯಕೀಯ ತಜ್ಞರು ಎಲ್ಲರನ್ನೂ ಬೆಚ್ಚಿ ಬೀಳಿಸುವಂತಹ ಒಂದು ವಾರ್ತೆಯನ್ನು ಪ್ರಕಟಿಸಿದ್ದರು.

ಬ್ರಿಟನ್‌ನ 20 ವಯಸ್ಸಿಗಿಂತ ಕೆಳಗಿನ ತಾಯಂದಿರಲ್ಲಿ $^2/_3$ ಮಂದಿ ವಿವಾಹಕ್ಕಿಂತ ಮುಂಚೆಯೇ ಗರ್ಭಧರಿಸುತ್ತಾರೆ. ಲಂಡನ್‌ನಲ್ಲಿ ಹುಟ್ಟುವ 23% ಮಕ್ಕಳು ಜಾರ ಸಂತಾನವಾಗಿದ್ದಾರೆ. 16 ಅಥವಾ 17 ವಯಸ್ಸು ದಾಟಿದವರಲ್ಲಿ ಕನ್ಯೆಯರು ವಿರಳ ವಾಗಿದ್ದಾರೆ. ಆದರೆ ಇತರೆಡೆಗಳಿಂದ ಬರುತ್ತಿರುವ ಅಂಕಿಅಂಶಗಳು ಈ ಎಲ್ಲ ಮಾಹಿತಿಗಳನ್ನು ಮೀರಿಸುತ್ತಿದೆ.

ಕ್ಯೂಬಾದಲ್ಲಿ ವಿವಾಹ ಪೂರ್ವದಲ್ಲಿಯೇ ಹನಿಮೂನ್ ಆಚರಿಸುವ ಅನುಮತಿ ನೀಡಿದ ಅಲ್ಲಿನ ಸರಕಾರಕ್ಕೆ ಯುವಕ ಯುವತಿಯರು ಕೃತಜ್ಞತೆ ಅರ್ಪಿಸಿದ್ದಾರೆ. ದೇಶದ ವಿವಿಧೆಡೆಗಳಲ್ಲಿ

'ಪ್ರೊಸಾದ' ಎಂಬ ಹೆಸರಿನ ರೆಸ್ಟೊರೆಂಟ್‌ಗಳನ್ನು ಸರಕಾರವೇ ನಿರ್ಮಿಸಿಕೊಟ್ಟಿದೆ. ಪೊಲೀಸ್ ಅಥವಾ ತನಿಖಾ ಅಧಿಕಾರಿಗಳು ಖಾಸಗಿತನಕ್ಕೆ ಅಡ್ಡಿಪಡಿಸುವರೆಂದು ಹೆದರಬೇಕಾಗಿಲ್ಲ. ಪ್ರೊಸಾದಗಳಲ್ಲಿ ಪ್ರೇಮಿಗಳನ್ನು ಯಾರೂ ತೊಂದರೆಪಡಿಸುವುದಿಲ್ಲ. ಪರದೆಯ ಹಿಂದಿನಿಂದ ವೈಟರ್‌ಗಳು ಅವರಿಗೆ ಆಹಾರ ಮತ್ತು ಮದ್ಯವನ್ನು ಬಡಿಸುತ್ತಾರೆ. ಶಯ್ಯಾಗಾರ ಮತ್ತು ಸ್ನಾನದ ಕೋಣೆಗಳನ್ನು ಯಥೇಷ್ಟವಾಗಿ ಬಳಸಬಹುದು. ಪ್ರೊಸಾದಗಳಿಗೆ ಸ್ವಪ್ನಭವನವೆಂದು ಹೆಸರಿಸಲಾಗಿದೆ. ಇಲ್ಲಿ ಬಂದು ಮಜಾ ಮಾಡುವವರ ಹೆಸರು, ವಿಳಾಸ ಅಥವಾ ಇತರ ದಾಖಲೆ ಪತ್ರಗಳನ್ನು ಯಾರೂ ಕೇಳುವುದಿಲ್ಲ. ಸರ್ವತ್ರ ಸ್ವತಂತ್ರ!!

ಹೆಚ್ಚುತ್ತಿರುವ ಅಕ್ರಮ ಗರ್ಭಧಾರಣೆಯ ತಡೆಗಾಗಿ ಶಾಲಾ ವಿದ್ಯಾರ್ಥಿನಿಯರಿಗೆ ಗರ್ಭ ನಿರೋಧಕ ವಸ್ತುಗಳನ್ನು ನೀಡಬೇಕೆಂಬ ಸಲಹೆಯು ಇತ್ತೀಚೆಗೆ ತಾಂಝಾನಿಯಾದಲ್ಲಿ ಭಾರಿ ವಿವಾದಕ್ಕೆ ಹೇತುವಾಯಿತು. ತಾಂಝಾನಿಯಾದಲ್ಲಿ ಅವಿವಾಹಿತ ತಾಯಂದಿರನ್ನು ಸಮಾಜವು ಅಂಗೀಕರಿಸುತ್ತಿದೆ. ಆದರೆ ಆ ತಾಯಂದಿರು ಮತ್ತು ಜಾರಸಂತಾನಗಳ ದುರ್ಗತಿಯ ಬಗ್ಗೆ ಯಾರಾದರೂ ಚಿಂತಿಸುವವರಿರಬಹುದೇ? ಸ್ವೀಡನ್‌ನಿಂದ ಬಂದ ವಾರ್ತೆಯನ್ನು ಗಮನಿಸಿರಿ:

ಸ್ವೀಡನ್‌ನಲ್ಲಿ ಲೈಂಗಿಕತೆಯನ್ನು ಉದಾರೀಕರಣಗೊಳಿಸುವ ಕ್ರಮವು ಭಾರೀ ಕೋಲಾಹಲಕ್ಕೆ ಕಾರಣವಾಯಿತು. 15 ವಯಸ್ಸಿನ ವಿದ್ಯಾರ್ಥಿನಿಯರು ಮತ್ತು ಅಧ್ಯಾಪಕರ ಲೈಂಗಿಕ ಸಂಪರ್ಕವನ್ನು ಕಾನೂನು ಬದ್ಧಗೊಳಿಸುವ ಕ್ರಮವು ವಿವಾದಾಸ್ಪದವಾಯಿತು. ಜಪಾನಿನಲ್ಲಿ ಆತ್ಮಹತ್ಯೆ ಮತ್ತು ವಿವಾಹ ವಿಚ್ಛೇದನ ಹೆಚ್ಚುತ್ತಿದೆಯೆಂದು ವರದಿಗಳಲ್ಲಿ ಕಾಣಿಸುತ್ತಿದೆ. ಆತ್ಮಹತ್ಯೆಯು 20% ಮತ್ತು ವಿವಾಹ ವಿಚ್ಛೇದನ 9.20% ಹೆಚ್ಚಿದೆಯೆಂದು ಅಧಿಕೃತ ಅಂಕಿಅಂಶಗಳು ಸಾಬೀತುಪಡಿಸುತ್ತಿವೆ.

ಅದೇನಿದ್ದರೂ ಹಣ, ಪ್ರಸಿದ್ಧಿ ಮತ್ತು ಜೀವನ ಸೌಲಭ್ಯಗಳೇ ಸುಖ ನೆಮ್ಮದಿಯ ಉಪಕರಣಗಳಾಗಿವೆ. ಆದರೆ ನಮಗೆ ದೊರೆಯುವ ಸುಖ ಸಂತೃಪ್ತಿಯು ಅವುಗಳನ್ನು ಹೇಗೆ ಬಳಸಲಾಗುತ್ತಿದೆಯೆಂಬುದನ್ನು ಅವಲಂಬಿಸಿದೆ. ಅವುಗಳನ್ನು ದುರುಪಯೋಗಿಸಿದರೆ ಸುಖ ನೆಮ್ಮದಿ ದೊರೆಯಲಾರದು. ತದ್ವಿರುದ್ಧವಾದರೆ ಅವು ದೊರೆಯಬಹುದು.

ಆ•ಖ

# ಸೇವೆಯಿಂದ ಮನಃಶಾಂತಿ

ಮನಃಶಾಂತಿಯ ಕುರಿತು ಕುರ್‌ಆನ್ ಹೀಗೆ ಹೇಳಿದೆ:

"ಜನರಿಗೆ ಇಂದ್ರಿಯಾಸಕ್ತಿಗಳಾದ- ಸ್ತ್ರೀಯರು, ಮಕ್ಕಳು, ಚಿನ್ನ-ಬೆಳ್ಳಿಗಳ ರಾಶಿ, ಆಯ್ದ ಕುದುರೆಗಳು, ಜಾನುವಾರುಗಳು ಮತ್ತು ಕೃಷಿ ಭೂಮಿ- ಇವುಗಳನ್ನು ಅತ್ಯಾಕರ್ಷಕವಾಗಿ ಮಾಡಲಾಗಿದೆ. ಆದರೆ, ಇವೆಲ್ಲ ಇಹಲೋಕದ ಕೆಲವೇ ದಿನಗಳ ಜೀವನ ಸಾಧನಗಳು. ಯಥಾರ್ಥದಲ್ಲಿ ಅತ್ಯುತ್ತಮ ವಾಸಸ್ಥಳವಂತು ಅಲ್ಲಾಹನ ಬಳಿಯಲ್ಲಿದೆ."

(ಪವಿತ್ರ ಕುರ್‌ಆನ್, 3:14)

ಮನಃಶಾಂತಿ ದೊರೆಯುವ ಮಾರ್ಗ ಯಾವುದೆಂದೂ ಕುರ್‌ಆನ್ ಹೇಳಿದೆ: ಈ ಕೆಳಗಿನ ವಚನವನ್ನು ಗಮನಿಸಿರಿ:

"ಓ ಮಾನವಾ, ನಿನಗೊದಗುವ ಪ್ರತಿಯೊಂದು ಒಳಿತೂ ಅಲ್ಲಾಹನ ಕೃಪೆಯಿಂದ ಒದಗುತ್ತದೆ ಮತ್ತು ನಿನಗೊದಗುವ ಪ್ರತಿಯೊಂದು ವಿಪತ್ತೂ ನಿನ್ನ ಕರ್ಮದಿಂದಾಗಿರುತ್ತದೆ." (ಪವಿತ್ರ ಕುರ್‌ಆನ್, 4:79) ಈ ಜಗತ್ತಿನಲ್ಲಿ ಒಳಿತಿನ ಇಂಗಿತವು ಮೊದಲು ಸೂಚಿಸಿರುವಂತೆ ಮನಃಶಾಂತಿ ಮತ್ತು ಸಂತೃಪ್ತಿಯ ಜೀವನವಾಗಿದೆ. ತದ್ವಿರುದ್ಧ ಜೀವನವು ಕೇಡು ಎಂಬುದರ ಇಂಗಿತವಾಗಿದೆ. ಈ ಜೀವನವನ್ನು ನಾವೇ ನಿರ್ಮಿಸುತ್ತೇವೆ. ಹಾಗಾದರೆ ನಾವು ಎಚ್ಚರವಹಿಸಿದರೆ ಈ ಕೆಡುಕನ್ನು ಇಲ್ಲದಂತೆ ಮಾಡಬಹುದೆಂದು ಅದರರ್ಥವಲ್ಲವೇ? ಅದನ್ನು ಹೇಗೆ ಸಾಧಿಸಬಹುದೆಂದು ನಾವು ಪರಿಶೀಲಿಸೋಣ.

ಸತ್ಕರ್ಮವನ್ನು ಮಾಡಿ ಸ್ವಂತ ಕರ್ತವ್ಯಗಳನ್ನು ನಿರ್ವಹಿಸುವುದೇ ಅದರ ಹಾದಿಯಾಗಿದೆ. ಕುರ್‌ಆನಿನ ಈ ಕೆಳಗಿನ ವಚನವು ಗಮನಾರ್ಹವಾಗಿದೆ.

"ಪುರುಷನಾಗಿರಲಿ ಸ್ತ್ರೀ ಆಗಿರಲಿ ಯಾರು ಸತ್ಕರ್ಮವೆಸಗುವನೋ ಅವನು ಸತ್ಯ ವಿಶ್ವಾಸಿಯಾಗಿದ್ದರೆ ಅವನಿಗೆ ನಾವು ಇಹಲೋಕದಲ್ಲಿ ಪರಿಶುದ್ಧ ಜೀವನವನ್ನು ದಯಪಾಲಿಸುವೆವು ಮತ್ತು ಇಂತಹವರಿಗೆ (ಪರಲೋಕದಲ್ಲಿ) ಅವರ ಅತ್ಯುತ್ತಮ ಕರ್ಮಗಳಿಗನುಸಾರ ಪ್ರತಿಫಲ ನೀಡುವೆವು." (ಪವಿತ್ರ ಕುರ್‌ಆನ್, 16:97)

ಉತ್ತಮ ಅಥವಾ ಪರಿಶುದ್ಧ ಜೀವನವನ್ನು ದಯಪಾಲಿಸುವುದರ ತಾತ್ಪರ್ಯವು ಮನಃಶಾಂತಿ ಮತ್ತು ಸಂತೃಪ್ತಿಯ ಜೀವನವೇ ಆಗಿದೆ. ಸತ್ಕರ್ಮಗಳನ್ನು ಮಾಡುವಾಗ ನಮ್ಮ ಮನದಲ್ಲಿ ವಿಶೇಷ ಸಂತೋಷವಾಗುವುದಿಲ್ಲವೇ? ಸತ್ಯವಿಶ್ವಾಸಿಗಳಾದ ಮುಸ್ಲಿಮರಿಗೆ

ನಮಾಝ್‌ನ ವೇಳೆಯಾದ ಕೂಡಲೇ ನಮಾಝ್ ಮಾಡಿದರೆ ನೆಮ್ಮದಿಯೆನಿಸುತ್ತದೆ. ನಮಾಝ್ ಮಾಡದಿದ್ದರೆ ಅಥವಾ ನಮಾಝ್‌ನ ವೇಳೆ ತಪ್ಪಿದರೆ ಅಸಮಾಧಾನವಾಗುತ್ತದೆ. ಹಾಗೆಯೇ ನಮ್ಮ ಬಳಿಯಿರುವ ಹಣವನ್ನು ಉತ್ತಮ ಕಾರ್ಯಗಳಿಗಾಗಿ ವ್ಯಯಿಸಿದರೆ ಮನಸ್ಸಿಗೆ ಸಂತೋಷವಾಗುತ್ತದೆ. ಅದೇ ವೇಳೆ ಕೆಟ್ಟಕಾರ್ಯಗಳಿಗಾಗಿ ಖರ್ಚಾದರೆ ವ್ಯಸನವಾಗುತ್ತದೆ. ಹಾಗೆಯೇ ಮಾಡಿ ಮುಗಿಸಬೇಕಾದ ಕರ್ತವ್ಯಗಳನ್ನು ಕ್ಲಪ್ತ ಸಮಯದಲ್ಲಿ ನಿರ್ವಹಿಸಿದರೆ ಮತ್ತು ನಿರ್ವಹಿಸದಿದ್ದರೆ ಮನಸ್ಸಿನಲ್ಲಾಗುವ ಬದಲಾವಣೆ ನಮಗೆ ತಿಳಿದಿದೆಯಷ್ಟೆ.

ಒಂದು ಪದ್ಯವನ್ನು ಕಲಿತು ಅಥವಾ ಒಂದು ಲೆಕ್ಕವನ್ನು ಮಾಡಿ ಬರುವಂತೆ ಅಧ್ಯಾಪಕರು ಓರ್ವ ವಿದ್ಯಾರ್ಥಿಗೆ ತಿಳಿಸಿದರೆಂದು ಭಾವಿಸೋಣ. ಆ ಪದ್ಯವನ್ನು ಕಲಿತು ಅಥವಾ ಲೆಕ್ಕವನ್ನು ಮಾಡಿ ತರಗತಿಗೆ ಹೋಗುವಾಗ ಆ ವಿದ್ಯಾರ್ಥಿ ಅದೆಷ್ಟು ಸಂತೃಪ್ತನಾಗಿರಬಹುದು. ಅಧ್ಯಾಪಕರು ತರಗತಿಯಲ್ಲಿ ಇತರರಿಗಿಂತ ಮುಂಚೆ ನನ್ನಲ್ಲಿ ಕೇಳಲೆಂದು ಆತ ಕಾತರನಾಗಿರಬಹುದು. ಪದ್ಯ ಕಲಿಯದಿದ್ದರೆ? ಅಧ್ಯಾಪಕರು ತರಗತಿಗೆ ಬರುವಾಗ ಕಲಿಯದವರಿಗೆ ಕಸಿವಿಸಿಯಾಗುವುದು. ಅಧ್ಯಾಪಕರ ಕಣ್ತಪ್ಪಿಸಲು ಆದಷ್ಟು ಪ್ರಯತ್ನಿಸುವರು.

ಆದಾಯ ತೆರಿಗೆಯ ಕುರಿತು ಒಂದು ನಿರ್ದಿಷ್ಟ ತಾರೀಕಿನಂದು ಲೆಕ್ಕಪತ್ರಗಳನ್ನು ಹಾಜರುಪಡಿಸಬೇಕಾದ ಓರ್ವ ವ್ಯಾಪಾರಿಯ ಸ್ಥಿತಿಯನ್ನು ನೋಡಿರಿ. ಆ ತಾರೀಕಿಗಿಂತ ಮುಂಚೆ ದಿನರಾತ್ರಿ ಕೆಲಸ ಮಾಡಿಯಾದರೂ ಲೆಕ್ಕಪುಸ್ತಕವನ್ನು ಸರಿಪಡಿಸಿ ನಿಶ್ಚಿತ ದಿನವೇ ಹಾಜರು ಪಡಿಸಿದರೆ ಅದರಿಂದ ಆತನ ಮನಸ್ಸಿಗೆ ಎಷ್ಟೊಂದು ಸಮಾಧಾನವಾದೀತು! ಅಥವಾ ಅದು ಸಾಧ್ಯವಾಗದಿದ್ದರೆ? ಹಲವು ಬಾರಿ ಕಾಲಾವಕಾಶ ಪಡೆದು ಕೊನೆಗೆ ಅನಿವಾರ್ಯವಾಗಿ ಅಂತಿಮ ಹಂತದಲ್ಲಿ ಲೆಕ್ಕ ಸಮರ್ಪಿಸುವಂತಾದರೆ ಆ ಅವಧಿಯಲ್ಲಿ ಆತನ ಮಾನಸಿಕ ತುಮುಲ ಹೇಗಿರಬಹುದು? ಓರ್ವರು ನಿರ್ವಹಿಸಬೇಕಾದ ಕರ್ತವ್ಯವನ್ನು ಕ್ಲಪ್ತಸಮಯದಲ್ಲಿ ಮಾಡಿ ಮುಗಿಸಿದರೆ ಸಿಗುವ ಸಂತೋಷ ಮತ್ತು ಸಂತೃಪ್ತಿಯು ಬೇರೆ ಯಾವುದರಿಂದಲೂ ದೊರೆಯಲಾರದು.

ಒಂದು ಕಥೆ ಹೇಳುತ್ತೇನೆ: ಯರ್ಮೂಕ್ ಯುದ್ಧದಲ್ಲಿ ಹುದಾಫತುಲ್ ಅದವಿ ಯವರು(ರ) ತಮ್ಮ ಚಿಕ್ಕಪ್ಪನ ಮಗ ಮರಣಾಸನ್ನರಾಗಿದ್ದಾಗ ಸ್ವಲ್ಪ ನೀರು ತೆಗೆದುಕೊಂಡು ಅವರ ಬಳಿಗೆ ಹೋದರು. ಮರಣಾಸನ್ನರಾಗಿದ್ದ ಮತ್ತೋರ್ವರು ನೀರಿಗಾಗಿ ಯಾಚಿಸುತ್ತಿರುವುದು ಕೇಳಿಸಿದಾಗ ಚಿಕ್ಕಪ್ಪನ ಮಗನು ನೀರನ್ನು ಅವರಿಗೆ ಕೊಡುವಂತೆ ಸೂಚಿಸಿದರು. ಎರಡನೇ ವ್ಯಕ್ತಿಯು ನೀರು ಕುಡಿಯುವುದಕ್ಕಿಂತ ಮುಂಚೆ ಮೂರನೆ ವ್ಯಕ್ತಿಯು ನೀರು ಕೇಳಿದರು. ಆಗ ಆ ನೀರನ್ನು ಮೂರನೆಯಾತನಿಗೆ ಕೊಡುವಂತೆ ಆ ಮರಣಾಸನ್ನ ಯೋಧ ಹೇಳಿದರು. ಆದರೆ ಮೂರನೇ ವ್ಯಕ್ತಿಯ ಬಳಿಗೆ ತಲುಪಿದಾಗ ಅವರು ಕೊನೆಯುಸಿರೆಳೆದಿದ್ದರು. ಮರಳಿ ಎರಡನೇ ವ್ಯಕ್ತಿಯ ಬಳಿಗೆ ಬಂದಾಗ ಅವರೂ ಮೃತರಾಗಿರುವುದು ಕಾಣಿಸಿತು. ಹುದಾಫತುಲ್ ಬದವಿ ತಮ್ಮ ಚಿಕ್ಕಪ್ಪನ ಮಗನ ಬಳಿಗೆ ತಲುಪಿದಾಗ ಅವರೂ ಪ್ರಾಣ ಬಿಟ್ಟಿದ್ದರು! ಈ ಮೂವರೂ ಸಂಪೂರ್ಣ ಶಾಂತಿ ಸಮಾಧಾನದಿಂದ ಮರಣ

ಹೊಂದಿರುವರೆಂದು ಊಹಿಸಬಹುದಾಗಿದೆ. ಅವರು ತಮ್ಮ ಪ್ರಾಣರಕ್ಷಣೆಗಿಂತ ಇತರರ ಪ್ರಾಣರಕ್ಷಣೆಗೆ ಆದ್ಯತೆ ನೀಡಿದರು. ಅದು ಸಾಧ್ಯವಾಗಿರುವುದರಿಂದ ನಾವು ದೊಡ್ಡ ಪುಣ್ಯ ಕರ್ಮವನ್ನು ನಿರ್ವಹಿಸಿದೆವೆಂದು ಎಲ್ಲರೂ ಭಾವಿಸಿರಬಹುದು.

ಕಲ್ಲಿಕೋಟೆಯ ಸಮೀಪದಲ್ಲಿ ಕಾರ್ಯಾಚರಿಸುತ್ತಿರುವ ಕರುಣಾ ಇನ್ಸ್‌ಟಿಟ್ಯೂಟ್‌ನ ಬಗ್ಗೆ ಎಲ್ಲರಿಗೂ ತಿಳಿದಿರಬಹುದು. ಇದು ಕಿವುಡ ಮೂಗ ಮಕ್ಕಳಿಗೆ ಮಾತು ಮತ್ತು ಭಾಷೆ ಕಲಿಯಲು ವೈಜ್ಞಾನಿಕವಾಗಿ ತರಬೇತಿ ನೀಡುವ ಸಂಸ್ಥೆಯಾಗಿದೆ. ಜಗತ್ತಿನ ಎಲ್ಲೆಡೆ ಗಳಲ್ಲಿಯೂ ಇಂಥ ಸಂಸ್ಥೆಗಳಿವೆ. ಇದರ ಕೇಂದ್ರ ಕಚೇರಿಯು ಇಟೆಲಿಯಲ್ಲಿದೆ. 'ಕಾರುಣ್ಯ ಮಾತೆಯ ಪುತ್ರಿಯರು' ಎಂಬ ಸನ್ಯಾಸಿನಿ ಸಭೆಯ ಶ್ರಮ ಫಲದಿಂದ ಈ ಸಂಸ್ಥೆಗಳು ಹುಟ್ಟಿಕೊಂಡಿವೆ. ಮೇರಿ ಜೋಸೆಫ್ ರೊಸೆಲ್ಲಾ ಎಂಬಾಕೆಯು ಈ ಸನ್ಯಾಸಿ ಸಭೆಯ ಸ್ಥಾಪಕಿ. ಸಮಾಜದಿಂದ ತಿರಸ್ಕೃತ ಮತ್ತು ನಿರ್ಲಕ್ಷಿತರಾಗಿರುವವರಿಗೆ ಪ್ರೀತಿ, ಸೇವೆಯನ್ನು ಒದಗಿಸುವುದೇ ಈ ಸಭೆಯ ಉದ್ದೇಶವಾಗಿತ್ತು. ಮೇರಿ ರೊಸೆಲ್ಲರು ಇಡೀ ಜೀವನವನ್ನು ಈ ಸೇವೆಗಾಗಿ ವ್ಯಯಿಸಿ ಅದರಲ್ಲಿ ಮಾನಸಿಕ ಶಾಂತಿ ಸಮಾಧಾನವನ್ನು ಕಂಡುಕೊಂಡಿದ್ದರು. ಅವರಿಗೆ ಮನಃಶಾಂತಿ ದೊರೆತಿರುವುದು ಹಣ ಮತ್ತು ಜೀವನ ಸೌಲಭ್ಯಗಳಿಂದಲ್ಲ.

ಮಧ್ಯ ಕೇರಳದ ಸಿಸ್ಟರ್ ಮೇರಿ ಜೋಸ್ನಾರೂ ಜನಸೇವೆಯಿಂದ ಮನಃಶಾಂತಿ ಪಡೆದ ಇನ್ನೋರ್ವ ಕ್ರೈಸ್ತ ಸನ್ಯಾಸಿನಿಯಾಗಿದ್ದಾರೆ. ಅವರು ಸೇವೆಗಾಗಿ ಬಿಹಾರದ ಆದಿವಾಸಿಗಳನ್ನು ಆಯ್ಕೆ ಮಾಡಿದ್ದರು. ಅವರ ಬಳಿ ಹೋಗಿ ಅವರ ಸೋಗೆ ಗುಡಿಸಲಿನಲ್ಲಿ ವಾಸಿಸಿ ಅವರು ಸೇವಿಸುವ ಆಹಾರವನ್ನು ಸೇವಿಸಿ ಅವರ ಸೇವೆ ಮಾಡಿದರು. ಹಲವು ವರ್ಷಗಳಿಂದ ಶೋಷಣೆ ಮತ್ತು ಮರ್ದನಕ್ಕೆ ಗುರಿಯಾದ ಆದಿವಾಸಿಗಳಿಗೆ ಆ ಕ್ರೌರ್ಯಗಳ ವಿರುದ್ಧ ಧ್ವನಿಯೆತ್ತಲು ಆ ಕ್ರೈಸ್ತ ಸನ್ಯಾಸಿನಿ ಕಲಿಸಿದರು. ಅನಕ್ಷರಸ್ಥ ಮತ್ತು ಅಸಹಾಯಕರಾಗಿದ್ದ ಅವರನ್ನು ಪ್ರಜ್ಞಾವಂತಗೊಳಿಸಿದರು. ಓದು ಬರಹ ಕಲಿಸಿದರು. ಎಲ್ಲ ತೊಂದರೆಗಳನ್ನೂ ಸಂಕಷ್ಟಗಳನ್ನೂ ಸಹಿಸಿದರು. ಈ ರೀತಿಯ ಸೇವೆಯಿಂದ ಅವರ ಮನಸ್ಸಿಗೆ ಎಷ್ಟೊಂದು ಶಾಂತಿ ನೆಮ್ಮದಿ ದೊರೆತಿರಬಹುದೆಂದು ಊಹಿಸಿ ನೋಡಿರಿ.

ಆಲಪ್ಪುಝದ ಒಂದು ಲೇಡಿಸ್ ಹಾಸ್ಟೆಲ್‌ನ ಸಮೀಪವಿರುವ ಕ್ಲೋರಿನ್ ಟ್ಯಾಂಕ್ ಒಡೆದಾಗ ಹಾಸ್ಟೆಲ್ ವಾರ್ಡನ್ ಆಗಿದ್ದ ಕ್ರೈಸ್ತ ಸಿಸ್ಟರ್ ಲಯೋಲಾ ಮೈಮರೆತು ಹಾಸ್ಟೆಲ್ ವಾಸಿಗಳಲ್ಲಿ ಅನೇಕ ಮಂದಿಯನ್ನು ಪಾರುಗೊಳಿಸಿದರು. ಕೊನೆಗೆ ಅವರು ಹಾಗೂ ಇತರ ಇಬ್ಬರು ಸಾವಿಗೀಡಾದರು. ಅವರು ತಮ್ಮ ಪ್ರಾಣಕ್ಕಿಂತ ಇತರರ ಪ್ರಾಣಕ್ಕೆ ಪ್ರಾಧಾನ್ಯ ನೀಡಿದ್ದರು. ಆ ಮರಣದಿಂದ ಅವರಿಗೆ ಆತ್ಮಸಂತೃಪ್ತಿಯಾಗಿರಬಹುದೆಂಬುದರಲ್ಲಿ ಸಂದೇಹವಿಲ್ಲ.

ನೈಜ ಮನಃಶಾಂತಿ ಹೇಗೆ ದೊರೆಯುವುದೆಂದು ಕುರ್‌ಆನ್ ತಿಳಿಸಿರುವುದನ್ನು ನೋಡಿರಿ:

**"ಮನಶ್ಶಾಂತಿಯೊದಗುವುದು ಅಲ್ಲಾಹನ ಸ್ಮರಣೆಯಿಂದಲೇ ಎಂಬುದು ಖಚಿತ."**

**(ಪವಿತ್ರ ಕುರ್‌ಆನ್, 13:28)**

ದೇವನು ಸರ್ವಶಕ್ತ, ಸರ್ವವ್ಯಾಪಿ, ಆತನು ಅಖಿಲ ವಿಶ್ವವನ್ನೂ ಸಕಲ ಚರಾಚರಗಳನ್ನೂ ಸೃಷ್ಟಿಸಿ ಪರಿಪಾಲಿಸುತ್ತಿದ್ದಾನೆ. ಹೀಗೆ ದೃಢ ನಂಬಿಕೆಯಿರಿಸುವವರೇ ನೈಜದೇವ ವಿಶ್ವಾಸಿಗಳಾಗಿದ್ದಾರೆ. ಅಂತಹ ದೇವನು ನಮಗೆ ಒಳಿತು ಮತ್ತು ಕೆಡುಕನ್ನು ತೋರಿಸಿಕೊಟ್ಟು ಒಳಿತನ್ನು ಮಾಡುವಂತೆ ಮತ್ತು ಕೆಡುಕನ್ನು ತೊರೆಯುವಂತೆ ಆಜ್ಞಾಪಿಸುತ್ತಾನೆ. ನಮ್ಮಲ್ಲಿ ದೇವಸ್ಮರಣೆ ಉಂಟಾಗುವುದೆಂದರೆ ದೇವನ ಆದೇಶಗಳನ್ನು ಸರಿಯಾಗಿ ಪಾಲಿಸುವುದಾಗಿದೆ. ಹಾಗಾದರೆ ಮಾತ್ರ ನಮಗೆ ಮನಃಶಾಂತಿ ದೊರೆಯುತ್ತದೆ. ಕುರ್‌ಆನ್ ಈ ವಿಷಯವನ್ನು ಮತ್ತೊಮ್ಮೆ ಸ್ಪಷ್ಟಪಡಿಸುತ್ತದೆ:

**"ಸತ್ಯಾಹ್ವಾನವನ್ನು ಸ್ವೀಕರಿಸಿ ಸತ್ಕರ್ಮವೆಸಗಿದವರು ಅದೃಷ್ಟ ಶಾಲಿಗಳು. ಅವರಿಗೆ ಅತ್ಯುತ್ತಮ ಅಂತಿಮ ನೆಲೆ ಇದೆ."**

**(ಪವಿತ್ರ ಕುರ್‌ಆನ್, 13:29)**

ಸತ್ಕರ್ಮವೆಸಗಿದರೆ ಮನಃಶಾಂತಿ ಉಂಟಾಗುವುದೆಂದು ಹೇಳಲಾಗಿದೆಯಷ್ಟೆ. ಸತ್ಕರ್ಮ ಎಂದರೇನು? ಕೆಲವರ ಸತ್ಕರ್ಮಗಳು ಇತರರ ದೃಷ್ಟಿಯಲ್ಲಿ ದುಷ್ಕರ್ಮವೆನಿಸಬಹುದು. ಓರ್ವ ಕ್ರೈಸ್ತ ವಿಶ್ವಾಸಿಯು ಏಸುವಿನ ಪ್ರತಿಮೆಯ ಮುಂದೆ ಮೊಣಕಾಲೂರಿ ಪ್ರಾರ್ಥಿಸುವುದು, ಅಯ್ಯಪ್ಪ ಭಕ್ತರು ಶಬರಿಮಲೆಗೆ ಹೋಗಿ ಹರಕೆ ಸಲ್ಲಿಸುವುದು ಸತ್ಕರ್ಮವಾಗಿದೆ. ಆದರೆ ಓರ್ವ ನೈಜ ಮುಸ್ಲಿಮನ ದೃಷ್ಟಿಯಲ್ಲಿ ಅವು ತಪ್ಪು ಮತ್ತು ದುಷ್ಕರ್ಮವಾಗಿದೆ. ಮುಸ್ಲಿಮರಲ್ಲಿಯೇ ಅವರಲ್ಲೊಂದು ವಿಭಾಗವು ಪುಣ್ಯವೆಂದು ಭಾವಿಸುವ ಕರ್ಮಗಳು ನಿಷಿದ್ಧ ಮತ್ತು ಅಧರ್ಮವಾಗಿರುತ್ತದೆ.

ನನ್ನ ವಿಶ್ವಾಸ ಮತ್ತು ಕರ್ಮವು ಸತ್ಕರ್ಮವಾಗಿದೆಯೆಂಬ ದೃಢ ನಂಬಿಕೆಯಿದ್ದರೆ-ಅವು ಇತರರ ದೃಷ್ಟಿಯಲ್ಲಿ ದುಷ್ಕರ್ಮವಾಗಿದ್ದರೂ -ಅಂಥ ಕರ್ಮಗಳನ್ನು ಮಾಡುವಾಗ ಆತನಿಗೆ ಸಂತೃಪ್ತಿ ಮತ್ತು ಮನಃಶಾಂತಿ ದೊರೆಯುವುದೆಂಬುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಇಹಲೋಕದಲ್ಲಿ ಒಳಿತು ದಯಪಾಲಿಸಬೇಕೆಂದು ಪ್ರಾರ್ಥಿಸುವುದರ ಜತೆಗೆ ಪರಲೋಕದಲ್ಲಿಯೂ ಒಳಿತು ದಯಪಾಲಿಸುವಂತೆ ಪ್ರಾರ್ಥಿಸಬೇಕೆಂದು ನಮಗೆ ಆಜ್ಞಾಪಿಸಲಾಗಿದೆ. ಪರಲೋಕದಲ್ಲಿ ಒಳಿತು ದೊರೆಯಬೇಕಾದರೆ ಈ ಲೋಕದಲ್ಲಿ ಮನಃಶಾಂತಿ ದೊರೆಯುವ ಕರ್ಮಗಳನ್ನು ಮಾತ್ರ ಮಾಡಿದರೆ ಸಾಕಾಗಲಾರದು. ಆ ಕರ್ಮಗಳು ನೈಜ ಒಳಿತುಗಳಾಗಿರಬೇಕು.

ಫಾತಿಹಾ ಅಧ್ಯಾಯದಲ್ಲಿ

**'ನಮಗೆ ಸನ್ಮಾರ್ಗವನ್ನು ತೋರಿಸು.'** ಎಂದು ಈ ಧ್ಯೇಯದಿಂದಲೇ ಪ್ರಾರ್ಥಿಸಲಾಗುತ್ತಿದೆ. ಸನ್ಮಾರ್ಗದಲ್ಲಿ ಚಲಿಸಬೇಕಾದರೆ, ಈ ಲೋಕದಲ್ಲಿ ಮಾಡುವ ಕರ್ಮಗಳು ನೈಜ ಸತ್ಕರ್ಮಗಳಾಗಿರಬೇಕು. ಹಾಗಾದರೆ ಮಾತ್ರ ಈ ಜಗತ್ತಿನಲ್ಲಿ ನಮಗೆ ಮನಃಶಾಂತಿ ಮತ್ತು ಪರಲೋಕದಲ್ಲಿ ಪ್ರತಿಫಲ ದೊರೆಯುವುದು.

## ಸುಖದ ಮೂಲಗಳು

ಒಂದಿಲ್ಲೊಂದು ರೀತಿಯ ಸಂಕಷ್ಟವಿಲ್ಲದವರು ಈ ಜಗತ್ತಿನಲ್ಲಿ ಯಾರೂ ಇರಲಾರರು. ಈ ತತ್ವವನ್ನು ನಾವು ಚೆನ್ನಾಗಿ ಗ್ರಹಿಸಿದರೆ, ಬಹುತೇಕ ಮನೋದುಗುಡಗಳನ್ನು ನಾವು ದೂರೀಕರಿಸಬಹುದಾಗಿದೆ. ಈ ತತ್ವವನ್ನು ಪವಿತ್ರ ಕುರ್‌ಆನ್ ಈ ರೀತಿ ಪ್ರಸ್ತಾಪಿಸಿದೆ:

**"ವಾಸ್ತವದಲ್ಲಿ ನಾವು ಮಾನವನನ್ನು ಸಂಕಷ್ಟದಲ್ಲೇ ಸೃಷ್ಟಿಸಿದ್ದೇವೆ." (ಪವಿತ್ರ ಕುರ್‌ಆನ್, 90:4)** ಕಷ್ಟ ಮತ್ತು ಭ್ರಮೆಯು ಎರಡು ಭಿನ್ನ ಸ್ಥಿತಿಗಳಾಗಿವೆ. ಮೊದಲನೆಯದಕ್ಕೆ ಬಾಹ್ಯ ಮತ್ತು ಆಂತರಿಕ ಘಟಕಗಳಿವೆ. ಭ್ರಮೆಯು ಮನೋಭ್ರಾಂತಿಯಾಗಿದೆ. ಅದು ಬೆಳೆದು ಬಾಹ್ಯ ರೂಪ ತಾಳುತ್ತದೆ. ಅರ್ಥಾತ್ ಎರಡೂ ವಿಭಿನ್ನವಾಗಿವೆ. ಕುರ್‌ಆನ್‌ನಲ್ಲಿ ಸ್ಪಷ್ಟ ಪಡಿಸಲಾಗಿರುವಂತೆ ಸಂಕಷ್ಟಗಳಿಲ್ಲದ ಯಾರೊಬ್ಬರೂ ಈ ಜಗತ್ತಿನಲ್ಲಿರಲಾರರು. ಕೆಲವರಿಗೆ ಆರ್ಥಿಕ ಸಂಕಷ್ಟಗಳಿದ್ದರೆ ಕೆಲವರಿಗೆ ದೈಹಿಕ ಸಂಕಷ್ಟಗಳಿರುತ್ತವೆ. ಕೆಲವರಿಗೆ ಕೌಟುಂಬಿಕ ಸಮಸ್ಯೆಗಳಿರಬಹುದು. ಕೆಲವು ದೊಡ್ಡ ಉದ್ದಿಮೆದಾರರ, ಎಸ್ಟೇಟ್‌ದಾರರ, ಹೆಚ್ಚಿನ ಸಂಬಳವಿರುವ ಅಧಿಕಾರಿಗಳ ಮಕ್ಕಳು ಮಂದಬುದ್ಧಿಗಳಾಗಿ ಕಷ್ಟಪಡುತ್ತಾ, ಎಲ್ಲ ಆಧುನಿಕ ಚಿಕಿತ್ಸೆಗಳೂ ವಿಫಲವಾದ ಅನೇಕ ಘಟನೆಗಳಿಲ್ಲವೇ? ಪೋಲಿಯೋ ರೋಗದ ನಿಯಂತ್ರಣಕ್ಕಾಗಿ ಅರ್ಧಶತಮಾನಗಳಿಂದ ಸಂಶೋಧನೆ ನಡೆಸಿ ಔಷಧ ಸಂಶೋಧಿಸಿದ ವಿಜ್ಞಾನಿ ಡಾ| ಆಲ್ಬರ್ಟ್ ಸಾಬಿನ್ ಪೋಲಿಯೊ ಪೀಡಿತರಾಗಿ, 1983ರಲ್ಲಿ ಆಗಸ್ಟ್‌ನಲ್ಲಿ ಬೆನ್ನೆಲುಬಿನ ತೊಂದರೆಯ ನಿವಾರಣೆಗಾಗಿ ಶಸ್ತ್ರಕ್ರಿಯೆ ಮಾಡಿಸಿ ಹಾಸಿಗೆ ಹಿಡಿದರು. ಜಗತ್ತಿನಲ್ಲಿ ಪ್ರಪ್ರಥಮ ಬಾರಿ ಹೃದಯ ಕಸಿ ಶಸ್ತ್ರಕ್ರಿಯೆ ನಡೆಸಿದ ಡಾ| ಕ್ರಿಶ್ಚಿಯನ್ ಬರ್ನಾರ್ಡ್ ಹೃದ್ರೋಗದಿಂದ ನಿಧನರಾದರು.

ಸಂಕಷ್ಟಗಳು ಅವು ಯಾವುದೇ ರೀತಿಯದ್ದಾಗಿರಲಿ ಕ್ಷುಲ್ಲಕವೆಂದು ನಿರ್ಲಕ್ಷಿಸಿ ಬದುಕಲು ಸಾಧ್ಯವಾದರೆ ಜೀವನದಲ್ಲಿ ನಮಗೆ ಸುಖ ಸಂತೃಪ್ತಿ ದೊರೆಯುತ್ತದೆ. ನನ್ನ ಓರ್ವ ಶ್ರೀಮಂತ ಸಹಪಾಠಿಯ ನೆನಪಾಗುತ್ತಿದೆ. ಪ್ರತಿದಿನ ಆತ ಯಾವುದಾದರೊಂದು ಕಷ್ಟದ ಬಗ್ಗೆ ಹೇಳುತ್ತಲಿರುತ್ತಾನೆ. ಒಂದೋ ತಂದೆಗೆ ಜ್ವರ, ತಾಯಿಗೆ ಕೈಕಾಲು ನೋವು, ಅಥವಾ ಸಹೋದರಿಯ ಹೆರಿಗೆ, ಹೀಗೆ ಸಂಕಷ್ಟಗಳ ಸರಣಿ. ಇತರರಿಗೆ ತುಚ್ಛವೆಂದು ಭಾಸವಾಗುವ ವಿಷಯಗಳು ಆತನಿಗೆ ದೊಡ್ಡ ಸಮಸ್ಯೆಯೆನಿಸುತ್ತದೆ. ಆದ್ದರಿಂದ ಆತ ಯಾವಾಗಲೂ ಚಿಂತಿತನಾಗಿರುತ್ತಾನೆ.

**ಕುರ್‌ಆನಿನ 94:5,6** ವಚನಗಳಲ್ಲಿ ಇನ್ನೊಂದು ತತ್ವವನ್ನು ಕಲಿಸಲಾಗಿದೆ.

**"ವಾಸ್ತವದಲ್ಲಿ ಸಂಕೀರ್ಣತೆಯೊಂದಿಗೆ ವೈಶಾಲ್ಯವೂ ಇದೆ- ಖಂಡಿತವಾಗಿಯೂ ಸಂಕೀರ್ಣತೆಯೊಂದಿಗೆ ವೈಶಾಲ್ಯವೂ ಇದೆ."**

ಸಂಕಷ್ಟದ ಬಳಿಕ ನೆಮ್ಮದಿ ದೊರೆಯುತ್ತದೆ. ಅರ್ಥಾತ್, ಏನಾದರೂ ಸಮಸ್ಯೆ ಸಂಕಷ್ಟಗಳು ಬಂದಾಗ ನೆಮ್ಮದಿ ದೊರೆಯಬಹುದೆಂಬ ನಿರೀಕ್ಷೆಯಿಂದ ಸಮಾಧಾನ ಪಡಬೇಕು. ಮುಂದಿನ ಎರಡು ವಚನಗಳಲ್ಲಿ ನಾವು ಏನು ಮಾಡಬೇಕೆಂದೂ ಆದೇಶಿಸಲಾಗಿದೆ.

"ಆದುದರಿಂದ ನೀವು ಬಿಡುವು ಸಿಕ್ಕಿದಾಗ ದಾಸ್ಯ-ಆರಾಧನೆಯ ಪರಿಶ್ರಮದಲ್ಲಿ ತೊಡಗಿ ಬಿಡಿರಿ. ಮತ್ತು ನಿಮ್ಮ ಪ್ರಭುವಿನ ಕಡೆಗೇ ವಾಲಿಕೊಂಡಿರಿ."

(ಪವಿತ್ರ ಕುರ್‌ಆನ್, 94:7-8)

ನಮ್ಮ ಯಾವುದಾದರೊಂದು ಕೆಲಸವು ವಿಫಲವಾದರೆ ಅದರಿಂದ ನಿರಾಶರಾಗದೆ ಆ ಕೂಡಲೇ ಬೇರೊಂದು ಕೆಲಸದಲ್ಲಿ ತೊಡಗಿಸಿಕೊಳ್ಳಬೇಕು. ಯಾವುದಾದರೊಂದು ಪ್ರಯತ್ನದಲ್ಲಿ ನಾವು ಯಶಸ್ವಿಯಾಗಬಹುದು. ಕೆಲವೊಮ್ಮೆ ಪದೇಪದೇ ಅನೇಕ ವ್ಯವಹಾರಗಳು ವಿಫಲವಾದರೂ "ಇದು ಕೆಟ್ಟ ಕಾಲ, ನಾನೇನು ಮಾಡಿದರೂ ಯಶಸ್ವಿಯಾಗಲಾರದು. ಆದ್ದರಿಂದ ಇನ್ನು ಪ್ರಯತ್ನಿಸಿ ಪ್ರಯೋಜನವಿಲ್ಲ." ಎಂದು ಭಾವಿಸಿ ಹತಾಶೆಯಿಂದ ಕೈಕಟ್ಟಿ ಕುಳಿತುಕೊಳ್ಳುವವರು ನಮ್ಮಲ್ಲಿ ಧಾರಾಳವಾಗಿದ್ದಾರೆ. ಅವರಿಗೆ ಯಾವಾಗಲೂ ನಿರಾಶೆಯೇ ಗತಿ. ಜೀವನದಲ್ಲಿ ಅವರು ಯಶಸ್ವಿಯಾಗಲಾರರು.

## ಅನುಭವಗಳೆಲ್ಲ ಪರೀಕ್ಷೆಗಳು

ಅಲ್ ಬಕರಃ ಅಧ್ಯಾಯದಲ್ಲಿ ಅಲ್ಲಾಹನು ಎಚ್ಚರಿಸಿರುವುದನ್ನು ನೋಡಿರಿ:

"ನಾವು ನಿಮ್ಮನ್ನು ಭಯಾಶಂಕೆ, ಹಸಿವು, ಧನಹಾನಿ, ಜೀವಹಾನಿ ಮತ್ತು ಉತ್ಪನ್ನಗಳ ನಾಶಗಳಿಗೊಳಪಡಿಸಿ ಅವಶ್ಯವಾಗಿಯೂ ಪರೀಕ್ಷಿಸುವೆವು. ಇಂತಹ ಸನ್ನಿವೇಶಗಳಲ್ಲಿ ತಾಳ್ಮೆ ವಹಿಸಿದವರಿಗೆ ಸುವಾರ್ತೆ ನೀಡಿರಿ. ಅಂತಹವರ ಮೇಲೆ ವಿಪತ್ತೇನಾದರೂ ಎರಗಿದಾಗ ಅವರು 'ನಿಶ್ಚಯವಾಗಿಯೂ ನಾವು ಅಲ್ಲಾಹನವರು ಮತ್ತು ಅಲ್ಲಾಹನೆಡೆಗೇ ನಮಗೆ ಮರಳಲಿಕ್ಕಿದೆ' ಎನ್ನುವರು. ಅವರ ಮೇಲೆ ಅವರ ಪ್ರಭುವಿನ ಕಡೆಯಿಂದ ಮಹಾ ಅನುಗ್ರಹ ಗಳಿರುವುವು. ಅವನ ಕಾರುಣ್ಯವು ಅವರನ್ನು ಆಚ್ಛಾದಿಸುವುದು ಮತ್ತು ಇಂತಹವರೇ ಸನ್ಮಾರ್ಗ ಹೊಂದಿದವರಾಗಿರುತ್ತಾರೆ."

(ಪವಿತ್ರ ಕುರ್‌ಆನ್, 2:155-157)

ಇಲ್ಲಿ ಅಲ್ಲಾಹನು ನಮ್ಮನ್ನು ಮುಖ್ಯವಾಗಿ ಐದು ರೀತಿಯಲ್ಲಿ ಪರೀಕ್ಷಿಸುವನೆಂದು ಹೇಳಲಾಗಿದೆ.

**1. ಭಯದಿಂದ:**

ಎಲ್ಲ ಸೌಭಾಗ್ಯಗಳೂ ದೊರೆತಿರುವ ಓರ್ವ ವ್ಯಕ್ತಿಯ ಕೈಯಲ್ಲಿ ಹೇರಳ ಸಂಪತ್ತು ಬಂದಾಗ ಅದನ್ನು ಎಲ್ಲಿ ಜತನವಾಗಿಡುವುದೆಂಬ ಭೀತಿ! ಯಾರಿಗಾದರೂ ವಹಿಸಿಕೊಟ್ಟರೆ ಅದು ಮರಳಿ ದೊರೆಯಬಹುದೇ? ತನ್ನ ಬಳಿಯೇ ಇರಿಸಿಕೊಂಡರೆ ಇನ್‌ಕಮ್ ಟೇಕ್ಸ್ ಅಥವಾ ಎನ್‌ಫೋರ್ಸ್‌ಮೆಂಟ್ ಅಧಿಕಾರಿಗಳು ಬಂದು ತನಿಖೆ ನಡೆಸಬಹುದೇ? ಹೀಗೆ ಭಯವು ಅವರನ್ನು ಕಾಡುತ್ತಿರುತ್ತದೆ. ಗಾಳಿ ಮಳೆ ಬಂದಾಗ ಗುಡಿಸಲುಗಳಲ್ಲಿರುವವರಿಗೆ ಅದು ಕುಸಿದು ಬಿದ್ದು ಪ್ರಾಣಾಪಾಯವಾದೀತೇ ಎಂಬ ಭೀತಿ, ವಿದ್ಯಾರ್ಥಿಗಳಿಗೆ ಕೆಲವೊಮ್ಮೆ ಪರೀಕ್ಷೆಯಲ್ಲಿ ಪಾಸಾಗುತ್ತೇವೆಯೋ, ಫೈಲಾದರೆ ಇತರರ ಮುಂದೆ

ಅವಮಾನಿತರಾಗಿ ಬಿಡುವೆವೋ ಎಂಬ ಭೀತಿ. ರ್‍ಯಾಂಕ್ ದೊರೆಯುವ ಸಾಧ್ಯತೆಯಿರುವ ಮಕ್ಕಳಿಗೆ ರ್‍ಯಾಂಕಿನಲ್ಲಿ ಹಿಂದೆ ಬೀಳುವ ಬಗ್ಗೆ ಆಶಂಕೆ, ಹೀಗೆ ಹಲವರಿಗೆ ಹಲವು ರೀತಿಯ ಭಯವಿರುತ್ತದೆ.

**2. ಹಸಿವೆಯಿಂದ**

ಹೊಟ್ಟೆಗೆ ಆಹಾರವಿಲ್ಲದೆ ವಿವಶರಾದಾಗ ಕೆಲವರು ನೀಚಕೃತ್ಯಗಳಿಗೂ ಕೈ ಹಾಕುತ್ತಾರೆ. ಸುಖಸಂಪತ್ತುಗಳಿದ್ದರೂ ಕೆಲವರಿಗೆ ಆಹಾರ ಸೇವಿಸಲಾಗದೆ ಹಸಿವೆ ಸಹಿಸಬೇಕಾಗುತ್ತದೆ.

**3. ಧನಹಾನಿಯಿಂದ**

ಚೆನ್ನಾಗಿ ವ್ಯಾಪಾರ ನಡೆಸುತ್ತಿರುವವರಿಗೂ ಕೆಲವೊಮ್ಮೆ ಅನಿರೀಕ್ಷಿತವಾಗಿ ನಷ್ಟ ಸಂಭವಿಸಬಹುದು. ಅಥವಾ ಹಲವು ವರ್ಷಗಳ ದುಡಿಮೆಯಿಂದ ಸಂಪಾದಿಸಿದ ಹಣವು ಸಂಪೂರ್ಣವಾಗಿ ಅಪಹರಣ, ದರೋಡೆಗಳಿಗೆ ಬಲಿಯಾಗಬಹುದು. ನಮಗೆ ಅಥವಾ ನಮ್ಮ ಕುಟುಂಬಿಕರ ಮಾರಕರೋಗದ ಚಿಕಿತ್ಸೆಗಾಗಿ ಎಲ್ಲ ಸಂಪಾದನೆಯೂ ಖರ್ಚಾಗಬಹುದು.

**4. ಮರಣದಿಂದ**

ಹತ್ತಿರದ ಸಂಬಂಧಿಕರು ಅಥವಾ ಮಿತ್ರರು ಮರಣಹೊಂದಿದಾಗ ಪ್ರತಿಯೊಬ್ಬರಿಗೂ ಅಪಾರ ದುಃಖವಾಗುತ್ತದೆ.

**5. ಉತ್ಪನ್ನಗಳ ಕೊರತೆ ಮತ್ತು ಹಾನಿಯಿಂದ**

ಇವು ಕೂಡಾ ಭಯಕ್ಕೆ ಕಾರಣವಾಗಿವೆ. ಆದಷ್ಟು ಸಾಲಮಾಡಿ ಬೆಳೆಸಿದ ಕೃಷಿಯು ಒಂದೇ ಚಂಡಮಾರುತದಿಂದ ಅಥವಾ ನೆರೆಯಿಂದ ನಾಶವಾಗಿ ಬಿಡುವುದಿಲ್ಲವೇ? ಶೇಖರಿಸಿದ ಉತ್ಪನ್ನಗಳು ಲೂಟಿಯಾಗುವುದಿಲ್ಲವೇ? ಮೇಲೆ ವಿವರಿಸಲಾಗಿರುವ ಈ ಎಲ್ಲ ಸಂದರ್ಭ ಗಳಲ್ಲಿಯೂ ನಮ್ಮ ಮನಸ್ಸು ಚಂಚಲಗೊಂಡು ಅಲ್ಲಾಹನ ಕಾರುಣ್ಯದ ಬಗ್ಗೆ ಸಂದೇಹ ಮೂಡಿಸುವ ಸಾಧ್ಯತೆಗಳಿವೆ. ಇವೆಲ್ಲವೂ ಪರೀಕ್ಷೆಗಳಾಗಿವೆ. ಒಂದಿಲ್ಲೊಂದು ರೀತಿಯ ಕಷ್ಟ ಕೋಟಲೆಗಳಿಲ್ಲದ ಜನರು ಈ ಲೋಕದಲ್ಲಿ ಯಾರೂ ಇರಲಾರರು. ಈ ಪರೀಕ್ಷೆಗಳ ವೇಳೆ ಕಿಂಚಿತ್ತೂ ವಿಚಲಿತವಾಗುವುದಿಲ್ಲವೆಂಬ ದೃಢ ನಿರ್ಧಾರದಿಂದ ತಾಳ್ಮೆ ವಹಿಸುವವರಿಗೆ ಸುವಾರ್ತೆ ತಿಳಿಸಬೇಕೆಂದು ಕುರ್‌ಆನ್, ಪ್ರವಾದಿಯವರಿಗೆ ಆದೇಶಿಸಿದೆ. ಹೀಗೆ ತಾಳ್ಮೆ ವಹಿಸಿ ನಾವು ಅಲ್ಲಾಹನಿಂದ ಬಂದವರು, ಅಲ್ಲಾಹನೆಡೆಗೆ ಮರಳುವವರು ಎಂದು ಹೇಳಿ ಸಮಾಧಾನ ಪಡುವವರಿಗೆ ಅಲ್ಲಾಹನ ಕರುಣೆ ಮತ್ತು ಅನುಗ್ರಹ ಲಭಿಸುವುದೆಂದು ನಮ್ಮನ್ನು ಎಚ್ಚರಿಸಲಾಗಿದೆ. ತದ್ವಿರುದ್ಧವಾಗಿ ತಾಳ್ಮೆ ವಹಿಸಲಾಗದೆ ಅಲ್ಲಾಹನನ್ನೂ ವಿಧಿಯನ್ನೂ ಹಳಿಯುವವರಿಗೆ ಇಹಲೋಕದಲ್ಲಿ ಶಾಂತಿಯಿರಲಾರದು ಮಾತ್ರವಲ್ಲ, ಪರಲೋಕದಲ್ಲಿಯೂ ಅವರಿಗೆ ಯಾವುದೇ ರಕ್ಷಣೆಯಿರಲಾರದು.

ಕೇವಲ ಕಷ್ಟಕೋಟಲೆಗಳಿಂದ ಮಾತ್ರವಲ್ಲ, ಸುಖ ಸಂಪತ್ತು ಸಂತಾನ ಸೌಭಾಗ್ಯಗಳನ್ನು ನೀಡಿಯೂ ಕೆಲವೊಮ್ಮೆ ಅಲ್ಲಾಹನು ನಮ್ಮನ್ನು ಪರೀಕ್ಷಿಸುವನೆಂದು ಈ ಕೆಳಗಿನ ವಚನದಿಂದ ನಾವು ಗ್ರಹಿಸಬಹುದಾಗಿದೆ.

"ಪ್ರತಿಯೊಂದು ಜೀವಿಗೂ ಮರಣದ ಸವಿಯನ್ನು ಅನುಭವಿಸಲಿಕ್ಕಿದೆ ಮತ್ತು ನಾವು ನಿಮ್ಮೆಲ್ಲರನ್ನೂ ಸುಸ್ಥಿತಿ-ದುಸ್ಥಿತಿಗಳಲ್ಲಿಟ್ಟು ಪರೀಕ್ಷಿಸುತ್ತಿದ್ದೇವೆ, ಕೊನೆಗೆ ನೀವು ನಮ್ಮ ಕಡೆಗೇ ಮರಳಲಿದ್ದೀರಿ." (ಪವಿತ್ರ ಕುರ್‌ಆನ್, 21:35)

ಮರಣವು ಆದೊಂದು ದಿನ ನಮ್ಮನ್ನು ಹಿಡಿಯುವುದೆಂಬ ಪ್ರಧಾನ ನೀತಿಯನ್ನು ನೆನಪಿಸಿದ ಬಳಿಕ ಒಳಿತು ಕೆಡುಕುಗಳಿಂದ ನಮ್ಮನ್ನು ಪರೀಕ್ಷಿಸಲಾಗುವುದೆಂದು ಅಲ್ಲಾಹನು ಹೇಳಿದ್ದಾನೆ. ಲೌಕಿಕ ಜೀವನವು ನಶ್ವರವಾಗಿದೆ. ಮಾನವನಿಗೆ ಮರಣ ಸುನಿಶ್ಚಿತವಾಗಿದೆ. ಆದ್ದರಿಂದ ಸುಸ್ಥಿತಿ ಬಂದಾಗ ಅಹಂಕಾರಪಡಬಾರದು ಅಥವಾ ದುಸ್ಥಿತಿ ಬಂದಾಗ ನಿರಾಶರಾಗಬಾರದು. ಕೊನೆಗೆ ನಮ್ಮನ್ನು ಅಲ್ಲಾಹನ ಸನ್ನಿಧಿಗೆ ಸಾಗಿಸಲಾಗುವುದು. ಅಲ್ಲಿ ಇಹಲೋಕದ ಚಟುವಟಿಕೆಗಳನ್ನು ವಿಶ್ಲೇಷಿಸಲಾಗುವುದು. ಅವುಗಳ ಪ್ರತಿಫಲ ದೊರೆಯುವುದು.

ಪರೀಕ್ಷೆಯು ಇತರ ಯಾವ ರೀತಿಯಲ್ಲಿರಬಹುದೆಂದು ಬೇರೆ ಕೆಲವು ವಚನಗಳಲ್ಲಿ ಅಲ್ಲಾಹನು ವಿವರಿಸಿದ್ದಾನೆ.

"ನಿಮ್ಮ ಸಂಪತ್ತು ಮತ್ತು ಸಂತತಿಗಳು ಒಂದು ಪರೀಕ್ಷೆಯಾಗಿದೆ. ಅತ್ಯುನ್ನತ ಪ್ರತಿಫಲ ವಂತು ಅಲ್ಲಾಹನ ಬಳಿಯಲ್ಲೇ ಇದೆ." (ಪವಿತ್ರ ಕುರ್‌ಆನ್, 64:15)

ಅದನ್ನೇ ಇನ್ನೊಂದು ವಚನದಲ್ಲಿ ಪುನರಾವರ್ತಿಸಲಾಗಿದೆ.

"ನಿಮ್ಮ ಸೊತ್ತುಗಳು ಮತ್ತು ನಿಮ್ಮ ಸಂತತಿಗಳು ವಾಸ್ತವದಲ್ಲಿ ಪರೀಕ್ಷಾ ಸಾಧನ ಗಳೆಂದೂ ಪ್ರತಿಫಲ ನೀಡಲು ಅಲ್ಲಾಹನ ಬಳಿ ಬೇಕಾದಷ್ಟಿದೆಯೆಂದೂ ತಿಳಿದುಕೊಳ್ಳಿರಿ."

(ಪವಿತ್ರ ಕುರ್‌ಆನ್, 8:28)

"ಮುಸ್ಲಿಮರೇ, ನಿಮಗೆ ಸಂಪತ್ತು ಮತ್ತು ಪ್ರಾಣ ಇವೆರಡರ ಪರೀಕ್ಷೆಗಳೂ ಮುಂದೆ ಬಂದೇ ತೀರುವುವು." (ಪವಿತ್ರ ಕುರ್‌ಆನ್, 3:186)

ಈ ಕುರ್‌ಆನ್ ವಚನಗಳು ಅಲ್ಲಾಹನ ಪರೀಕ್ಷೆಗಳ ಬಗ್ಗೆ ಸ್ಪಷ್ಟ ಎಚ್ಚರಿಕೆಗಳಾಗಿವೆ.

ଓଃ•ଓ

# ಮುಗಿಯದ ಆಶೆಗಳು

**ಮಾ**ನವನು ಸಂಪತ್ತನ್ನು ಸ್ವರ್ಗಗಳಿಸಲಿಕ್ಕಾಗಿ ಅಥವಾ ನರಕ ಪಡೆಯಲಿಕ್ಕಾಗಿ ಉಪಯೋಗಿಸಬಹುದು. ನಮ್ಮ ಹಣವನ್ನು ಉತ್ತಮ ಹಾದಿಯಲ್ಲಿ ಖರ್ಚು ಮಾಡಿದಾಗ ಈ ಲೋಕದಲ್ಲಿ ನಮಗೆ ನೆಮ್ಮದಿ ಮತ್ತು ಮನಃಶಾಂತಿ ದೊರೆಯುವುದಲ್ಲದೆ ಪರಲೋಕ ದಲ್ಲಿಯೂ ನಮಗೆ ಪ್ರತಿಫಲ ದೊರೆಯುವುದು. ಹಾಗೆಯೇ ಹಣದಿಂದ ಇತರರನ್ನು ಪೀಡಿಸಲು ಮತ್ತು ಧರ್ಮಸಮ್ಮತವಲ್ಲದ ದುಷ್ಕರ್ಮಗಳನ್ನು ಮಾಡಲು ಸುಲಭವಿದೆ. ಎರಡನೆಯ ಹಾದಿಯಲ್ಲಿ ಹಣವನ್ನು ದುರುಪಯೋಗಿಸುವಾಗ ನಮ್ಮ ಆತ್ಮಸಾಕ್ಷಿಗೆ ಪೆಟ್ಟುಬಿದ್ದು ನಮ್ಮ ನೆಮ್ಮದಿಗೆಡುತ್ತದೆ. ಪರಲೋಕದಲ್ಲಿ ಅದಕ್ಕೆ ಶಿಕ್ಷೆಯನ್ನೂ ಅನುಭವಿಸ ಬೇಕಾಗುವುದು.

ಆರೋಗ್ಯವಂತ ದೇಹದ ಸ್ಥಿತಿಯೂ ಅಷ್ಟೇ. ನಮ್ಮ ಆರೋಗ್ಯವಂತ ದೇಹದಿಂದ ಅನೇಕ ಸೇವೆಗಳನ್ನು ಮಾಡಲು ಸಾಧ್ಯವಿದೆ. ಆ ಮೂಲಕ ಮನಃಶಾಂತಿ ಮತ್ತು ಸಂತೃಪ್ತಿ ಯನ್ನು ಸಾಧಿಸಬಹುದು. ಆದರೆ ಆರೋಗ್ಯವಂತ ದೇಹದಿಂದಲೇ ಇತರರನ್ನು ಪೀಡಿಸಲು, ಕಳ್ಳತನ ನಡೆಸಲು, ಅಕ್ರಮ ಚಟುವಟಿಕೆಗಳನ್ನು ಮಾಡಲು ಸಾಧ್ಯವಾಗುತ್ತದೆ. ಆದರೆ ನಮ್ಮ ಶಕ್ತಿಯನ್ನು ಈ ರೀತಿ ದುರುಪಯೋಗಿಸಿದರೆ ಇಹಪರದಲ್ಲಿ ಒಳಿತು ದೊರೆಯಲಾರದು.

ದರೋಡೆಕೋರಳಾದ ಫೂಲನ್‌ದೇವಿಗೆ ತನ್ನ ಜೀವನದಲ್ಲಿ ಜಿಗುಪ್ಸೆ ಮೂಡಿತೇಕೆ? ಆಕೆಗೆ ಸರಿಯಾದ ರೀತಿಯಲ್ಲಿ ಬದುಕಬೇಕೆಂಬ ಮನಸ್ಸಾಯಿತು. ಹಳೆಯ ಜೀವನದಲ್ಲಿ ನೆಮ್ಮದಿ ದೊರೆಯದಿದ್ದುದೇ ಈ ಪರಿವರ್ತನೆಗೆ ಪ್ರೇರಕವಾಯಿತೆಂಬುದರಲ್ಲಿ ಸಂದೇಹವಿಲ್ಲ.

ಉತ್ತಮ ಸಂತಾನಗಳನ್ನು ನೀಡಿ ಅಲ್ಲಾಹನು ಅನುಗ್ರಹಿಸಿದಾಗ ನಾವು ಸರ್ವಥಾ ಅಹಂಕಾರಪಡಬಾರದು ಅಥವಾ ಮಿತಿಮೀರಿ ಆನಂದಪಡಬಾರದು. ಸಂತಸಪಟ್ಟು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು. ನಾವು ಅದೆಷ್ಟೇ ಉತ್ತಮವಾಗಿ ಪ್ರಯತ್ನಿಸಿದರೂ ನಮ್ಮ ಸಂತಾನಗಳು ಕೆಲವೊಮ್ಮೆ ಕೆಟ್ಟವರಾಗಬಹುದು. ಊರಿನವರಿಂದಲೂ ಮನೆಯವರಿಂದಲೂ ವಿರೋಧವನ್ನು ಎದುರಿಸಬೇಕಾದೀತು. ಕೆಲವೊಮ್ಮೆ ನಮ್ಮಿಂದಲೇ ತಪ್ಪಾಗಿರಬಹುದು. ಇನ್ನು ಕೆಲವೊಮ್ಮೆ ಪರಿಸರದ ಪ್ರಭಾವವಾಗಿರಬಹುದು. ತಾಳ್ಮೆಯಿಂದ ಸಂತಾನಗಳ ಕುಂದುಕೊರತೆ ಗಳನ್ನು ಕಂಡು ಹಿಡಿದು ಅವರನ್ನು ಉತ್ತಮಪಡಿಸಲು ಪ್ರಯತ್ನಿಸಿ ಅದಕ್ಕಾಗಿ ಅಲ್ಲಾಹನೊಡನೆ ಪ್ರಾರ್ಥಿಸಬೇಕು. ಒಮ್ಮೆಯೂ ನಿರಾಶರಾಗಬಾರದು. ವಿಧಿಯನ್ನು ಹಳಿಯಬಾರದು. ಮಾನವನ

ಬಯಕೆಗೆ ಮಿತಿಯಿಲ್ಲ. ಆದ್ದರಿಂದ ನಮಗೆ ದೊರೆತ ಅನುಗ್ರಹಗಳು ಎಷ್ಟೇ ಸಣ್ಣದಾಗಿದ್ದರೂ ಅದಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು. ಸಂಕಷ್ಟಬಂದಾಗ ನಿರಾಶರಾಗಬಾರದು.

ಮಾನವ ಸ್ವಭಾವದ ಬಗ್ಗೆ ಕುರ್‌ಆನಿನ ಹಲವೆಡೆಗಳಲ್ಲಿ ಪ್ರಸ್ತಾಪಿಸಲಾಗಿರುವುದನ್ನು ಪರಿಶೀಲಿಸೋಣ.

**"ಒಳಿತಿಗಾಗಿ ಪ್ರಾರ್ಥಿಸಿದರೆ ಮಾನವನಿಗೆ ಜಿಗುಪ್ಸೆಯುಂಟಾಗುವುದಿಲ್ಲ, ಆದರೆ ಏನಾದರೂ ಕಷ್ಟಬಂದರೆ ಆತ ಸಂಪೂರ್ಣ ನಿರಾಶನಾಗಿ ಬಿಡುತ್ತಾನೆ."**

ನಮಗೇನಾದರೂ ಒಳಿತು ದೊರೆತರೆ ಅದಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಅರ್ಪಿಸುವ ಬದಲಾಗಿ ಮತ್ತಷ್ಟು ದೊರೆಯಲಿಕ್ಕಾಗಿ ಆಸೆಪಟ್ಟು, ಅದಕ್ಕಾಗಿ ಪ್ರಾರ್ಥಿಸುವುದು ರೂಢಿ. ಏನಾದರೂ ಕೆಡುಕು ಸಂಭವಿಸಿದರೆ ಅದನ್ನು ಸಹಿಸುವ ಸ್ಥೈರ್ಯ ನಮಗಿರುವುದಿಲ್ಲ. ನಾವು ನಿರಾಶರಾಗುತ್ತೇವೆ. ಈ ಎರಡು ಸಂದರ್ಭಗಳಲ್ಲಿಯೂ ನಮ್ಮ ಮನಸ್ಸಿಗೆ ಶಾಂತಿ ನೆಮ್ಮದಿಯಿರುವುದಿಲ್ಲ.

ಇದೇ ನೀತಿಯನ್ನು ಈ ಕೆಳಗಿನ ಕುರ್‌ಆನ್ ವಚನದಲ್ಲಿ ವಿವರಿಸಲಾಗಿದೆ. **"ನಾನು ಅವನಿಗೆ ಹೇರಳ ಸಂಪತ್ತನ್ನು ಕೊಟ್ಟೆನು, ಅವನ ಜೊತೆಯಲ್ಲೇ ಹಾಜರಿರುವ ಪುತ್ರರನ್ನು ಕೊಟ್ಟೆನು- ಮತ್ತು ಅವನ ಪಾಲಿಗೆ ನಾಯಕತ್ವದ ಮಾರ್ಗವನ್ನು ಸುಗಮ ಗೊಳಿಸಿದೆನು- ಇಷ್ಟಿದ್ದೂ ಅವನು, ನಾನು ಅವನಿಗೆ ಇನ್ನಷ್ಟು ಕೊಡಬೇಕೆಂದು ಆಶಿಸುತ್ತಿದ್ದಾನೆ." (ಪವಿತ್ರ ಕುರ್‌ಆನ್, 74:12-15)** ಒಟ್ಟಿನಲ್ಲಿ ಮಾನವನ ಆಸೆಗಳಿಗೆ ಮಿತಿಯಿಲ್ಲವೆಂಬುದೇ ಇದರ ಸಾರಾಂಶವಾಗಿದೆ.

ಮನೆಯಿಲ್ಲದ ಓರ್ವನಿಗೆ ಹೇಗಾದರೂ ಒಂದು ಸೋಗೆ ಗುಡಿಸಲು ಲಭ್ಯವಾದರೆ ಸಾಕೆಂದು ಬಯಸುತ್ತಾನೆ. ಅದು ದೊರೆತರೆ ಕಲ್ಲಿನ ಗೋಡೆ ನಿರ್ಮಿಸಬೇಕೆಂದು ಆಶಿಸುತ್ತಾನೆ. ಹೀಗೆ ಮುಂದುವರಿಯುತ್ತಾ ಒಂದು ಅರಮನೆಯನ್ನೇ ಕಟ್ಟಲು ಸಾಧ್ಯವಾದರೂ ಅದಕ್ಕಿಂತ ಸೌಲಭ್ಯವಿರುವ ಭವನವನ್ನು ಆತನು ಬಯಸುತ್ತಾನೆ. ಸರ್ವಸಜ್ಜಿತ ಅಡುಗೆಕೋಣೆ, ಆಧುನಿಕ ಶೈಲಿಯ ಸ್ನಾನ ಗೃಹ ಹೀಗೆ ಆತನ ಬೇಡಿಕೆಯ ಯಾದಿ ದೀರ್ಘವಾಗುತ್ತದೆ. ಹಾಗೆಯೇ ತನ್ನ ಊರಿನಲ್ಲಿ ಅತಿ ಶ್ರೀಮಂತನಾಗಿರುವ ಓರ್ವನಿಗೆ ರಾಜ್ಯದಲ್ಲಿಯೇ ಅತಿ ಶ್ರೀಮಂತ ನಾಗಬೇಕು, ಅದು ಸಾಧ್ಯವಾದರೆ ಇಡೀ ಭಾರತದಲ್ಲಿಯೇ ಅತಿದೊಡ್ಡ ಶ್ರೀಮಂತನಾಗಬೇಕು, ಅದೂ ಸಾಧ್ಯವಾದರೆ ಜಗತ್ತಿನ ಕೋಟ್ಯಾಧಿಪತಿಗಳಲ್ಲಿ ಅಗ್ರಗಣ್ಯನಾಗಬೇಕೆಂದು ಆಸೆ ಪಡುತ್ತಾನೆ. ನುರಿತ ಕ್ರೀಡಾ ಪಟುವಿನ ಅವಸ್ಥೆಯೂ ಅಷ್ಟೆ. ಜಿಲ್ಲೆಯಲ್ಲಿ ಪ್ರಥಮ ಸ್ಥಾನ ದೊರೆತರೆ ರಾಜ್ಯದಲ್ಲಿ, ಅದನ್ನು ಸಾಧಿಸಿದರೆ ರಾಷ್ಟ್ರಮಟ್ಟದಲ್ಲಿ, ಅನಂತರ ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಥಮ ಸ್ಥಾನಿಯಾಗಬೇಕೆಂದು ಆಸೆ ಪಡುತ್ತಾನೆ. ಎಲ್ಲವರಲ್ಲಿಯೂ ಅತ್ಯುನ್ನತ ಸ್ಥಾನ ದೊರೆತರೆ ಅದನ್ನು ಉಳಿಸಿಕೊಳ್ಳುವ ಕಾತರ. ಆಸೆಗಳಿರಲೇಬಾರದೆಂದು ಇದರ ಅರ್ಥವಲ್ಲ. ನಮಗೆ ದೊರೆತಿರುವುದರಲ್ಲಿ ಸಂತೃಪ್ತರಾಗಿ ಅದು ದೊರೆತುದಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಲು ನಾವು ಪ್ರಥಮತಃ ಸಿದ್ಧರಾಗಬೇಕು. ಇಂತಹ ಭಾವನೆಯಿಲ್ಲದಿದ್ದರೆ ಯಾವಾಗಲೂ ಮನೋವ್ಯಥೆ ಮತ್ತು ನಿರಾಶೆಯೇ ಗತಿ.

ಈ ಕೆಳಗಿನ ಕುರ್‌ಆನ್ ವಚನಗಳನ್ನು ಗಮನಿಸಿರಿ:

**"ನಾವು ಮಾನವನಿಗೆ ಕೊಡುಗೆಗಳನ್ನು ನೀಡಿದಾಗ ಅವನು ವಿಮುಖನಾಗುತ್ತಾನೆ ಮತ್ತು ದರ್ಪ ತೋರುತ್ತಾನೆ. ಅವನಿಗೇನಾದರೂ ವಿಪತ್ತು ಸೋಂಕಿದರೆ ಉದ್ದುದ್ದ ಪ್ರಾರ್ಥನೆಗಳನ್ನು ಸಲ್ಲಿಸುತ್ತಾನೆ." (ಪವಿತ್ರ ಕುರ್‌ಆನ್, 41:51)**

ಮಾನವನಿಗೆ ಹಣ ಮತ್ತು ಪ್ರತಾಪ ದೊರೆತಾಗ ಅಲ್ಲಾಹನನ್ನು ಸ್ಮರಿಸಲು ಮತ್ತು ಆತನಿಗೆ ಕೃತಜ್ಞತೆ ಸಲ್ಲಿಸಲು ನಮಗೆ ಬಿಡುವಿರುವುದಿಲ್ಲ. ಮತ್ತಷ್ಟು ಹಣ ಸಂಪಾದಿಸುವ ಪ್ರಯತ್ನದಲ್ಲಿ ದೇವ ಸ್ಮರಣೆಯಿಂದಲೇ ನಾವು ದೂರ ಸರಿದು ಬಿಡುತ್ತೇವೆ. ಆದರೆ ಸಂಕಷ್ಟಗಳು ಬಂದಾಗ ನಾವು ಕೇವಲ ಪ್ರಾರ್ಥನೆಯನ್ನು ಅವಲಂಬಿಸುತ್ತೇವೆ. ಕೆಲವು ಶ್ರೀಮಂತರು ಮತ್ತು ವ್ಯಾಪಾರಿಗಳಿಗೆ ಸುಸ್ಥಿತಿಯ ಕಾಲದಲ್ಲಿಯೂ ಪ್ರಾರ್ಥಿಸಲು ವೇಳೆಯಿರುವುದಿಲ್ಲ. ಆದರೆ ವ್ಯಾಪಾರವು ಕುಸಿದರೆ ಅವರು ಮಸೀದಿಯಲ್ಲಿ ದೀರ್ಘ ಪ್ರಾರ್ಥನೆಯಲ್ಲಿ ನಿರತರಾಗಿರುತ್ತಾರೆ; ಅಥವಾ ನಿತ್ಯ ಮಂದಿರಗಳಿಗೆ ಹೋಗುವವರಾಗಿ ಬಿಡುತ್ತಾರೆ.

ಮಾನವನಿಗೆ ಸಮೃದ್ಧಿಯನ್ನು ನೀಡಿ ಅನಂತರ ಅದನ್ನು ಆತನಿಂದ ಹಿಂತೆಗೆದು ಬಿಟ್ಟರೆ ಆತನ ಅವಸ್ಥೆ ಏನಾಗುವುದೆಂದು ಈ ಕೆಳಗಿನ ವಚನದಲ್ಲಿ ಕುರ್‌ಆನ್ ಸ್ಪಷ್ಟಪಡಿಸಿದೆ.

**"ನಾವು ಮಾನವನಿಗೆ ನಮ್ಮ ಕೃಪೆಯನ್ನು ನೀಡಿ ಅನಂತರ ಅದನ್ನು ಅವನಿಂದ ಕಸಿದುಕೊಂಡರೆ ಅವನು ನಿರಾಶನಾಗಿ ಕೃತಘ್ನತೆ ತೋರಲಾರಂಭಿಸುತ್ತಾನೆ."**

**(ಪವಿತ್ರ ಕುರ್‌ಆನ್, 11:9)**

ಉತ್ತಮ ಆರೋಗ್ಯವಂತ ದೇಹ; ಸದ್ಗುಣ ಸಂಪನ್ನರಾದ ಪತ್ನಿ ಮಕ್ಕಳು; ಅತ್ಯಾಧುನಿಕ ಸೌಲಭ್ಯಗಳಿರುವ ಮನೆ; ಪರಾವಲಂಬನೆಯಿಲ್ಲದೆ ಬಹಳ ಸುಖವಾಗಿ ಬಾಳುವುದಕ್ಕೆ ಬೇಕಾದ ಆರ್ಥಿಕ ಸೌಲಭ್ಯ. ಈ ಎಲ್ಲ ಅನುಗ್ರಹಗಳು ಲಭ್ಯವಾಗಿರುವ ಓರ್ವರಿಗೆ ಒಮ್ಮೆಲೆ ಆರೋಗ್ಯ ಕೆಟ್ಟಿತೆಂದು ಭಾವಿಸೋಣ. ಆಗ ಆತನು ತನಗೆ ಆ ತನಕ ದೊರೆತಿರುವ ಎಲ್ಲ ಅನುಗ್ರಹಗಳನ್ನೂ ಸಂಪೂರ್ಣ ಮರೆತು ಬಿಡುತ್ತಾನೆ. ಅತ್ಯಂತ ನಿರಾಶ ಮತ್ತು ಕೃತಘ್ನನಾಗಿ ಬಿಡುತ್ತಾನೆ. ಈ ಜಗತ್ತಿನಲ್ಲಿ ಅನುಗ್ರಹಗಳನ್ನು ದಯಪಾಲಿಸುವುದು ಮತ್ತು ಅದನ್ನು ತೆಗೆದು ಬಿಡುವುದೆಲ್ಲವೂ ಪರೀಕ್ಷೆಯೆಂದು ಆತನು ತಿಳಿಯುವುದಿಲ್ಲ. ಈ ಕೆಳಗಿನ ಕುರ್‌ಆನ್ ವಚನವು ಅದನ್ನು ಸ್ಪಷ್ಟಪಡಿಸಿದೆ.

"ಆದರೆ ಮಾನವನ ಅವಸ್ಥೆ ಹೀಗಿದೆ: ಅವನ ಪ್ರಭು ಅವನನ್ನು ಪರೀಕ್ಷೆಗೊಳಪಡಿಸಿದಾಗ ಮತ್ತು ಅವನಿಗೆ ಗೌರವ ಹಾಗೂ ಅನುಗ್ರಹ ದಯಪಾಲಿಸಿದಾಗ ಅವನು, ನನ್ನ ಪ್ರಭು ನನ್ನನ್ನು ಸನ್ಮಾನಿತನಾಗಿ ಮಾಡಿದನೆಂದು ಹೇಳುತ್ತಾನೆ. ಮತ್ತು ಅವನನ್ನು ಪರೀಕ್ಷೆಗೊಳಪಡಿಸಿದಾಗ ಮತ್ತು ಅವನ ಪಾಲಿಗೆ ಅವನ ಜೀವನಾಧಾರವನ್ನು ಸೀಮಿತಗೊಳಿಸಿದಾಗ ನನ್ನ ಪ್ರಭು ನನ್ನನ್ನು ಅಪಮಾನಿಸಿದನೆಂದು ಹೇಳುತ್ತಾನೆ." **(ಪವಿತ್ರ ಕುರ್‌ಆನ್, 89:15-16)**

ಐಶ್ವರ್ಯವನ್ನು ನೀಡುವುದೂ ಅನಂತರ ಅದನ್ನು ಹಿಂತೆಗೆದುಕೊಳ್ಳುವುದೂ ಪರೀಕ್ಷೆಯೆಂದು ಭಾವಿಸುವ ಮನೋಸ್ಥೈರ್ಯ ನಮಗಿರುವುದಿಲ್ಲ. ಮೊದಲು ದುಃಖ ಅನಂತರ ಅನುಗ್ರಹ ನೀಡಿದರೆ ಸಂಭವಿಸುವ ಸ್ಥಿತಿಯನ್ನು ಈ ಕೆಳಗಿನ ವಚನವು ವಿವರಿಸುತ್ತದೆ.

"ಜನರಿಗೇನಾದರೂ ಕಷ್ಟ ಬಂದಾಗ ಅವರು ತಮ್ಮ ಪ್ರಭುವಿನ ಕಡೆಗೆ ಮರಳಿ ಅವನನ್ನು ಪ್ರಾರ್ಥಿಸುತ್ತಾರೆ. ತರುವಾಯ ಅವನು ಅವರಿಗೆ ತನ್ನ ಕರುಣೆಯ ರಸಾಸ್ವಾದನ ಮಾಡಿಸಿದಾಗ ಹಠಾತ್ತನೆ ಅವರಲ್ಲಿ ಕೆಲವರು ನಾವು ಮಾಡಿದ ಉಪಕಾರಕ್ಕೆ ಕೃತಘ್ನತೆ ತೋರಿಸಲಿಕ್ಕಾಗಿ 'ದೇವಸಹಭಾಗಿತ್ವ' ಮಾಡತೊಡಗುತ್ತಾರೆ."

(ಪವಿತ್ರ ಕುರ್‌ಆನ್, 30:33)

"ಇದೇ ಮಾನವನಿಗೆ ಒಂದಿಷ್ಟು ಸಂಕಷ್ಟವು ಬಂದಾಗ ಅವನು ನಮ್ಮನ್ನು ಪ್ರಾರ್ಥಿಸುತ್ತಾನೆ ಮತ್ತು ನಾವು ಅವನಿಗೆ ನಮ್ಮ ಕಡೆಯಿಂದ ಕೊಡುಗೆಗಳನ್ನು ಕೊಟ್ಟು ಉಬ್ಬಿಸಿದಾಗ, 'ಇದನ್ನು ನನಗೆ ಜ್ಞಾನದ ಆಧಾರದಲ್ಲಿ ಕೊಡಲಾಗಿದೆ' ಎನ್ನುತ್ತಾನೆ. ಅಲ್ಲ, ವಾಸ್ತವದಲ್ಲಿ ಇದು ಪರೀಕ್ಷೆಯಾಗಿದೆ. ಆದರೆ ಇವರಲ್ಲಿ ಹೆಚ್ಚಿನವರು ಅರಿಯುವುದಿಲ್ಲ."

(ಪವಿತ್ರ ಕುರ್‌ಆನ್, 39:49)

ವ್ಯಾಪಾರದಲ್ಲಿ ಚೆನ್ನಾಗಿ ಲಾಭ ದೊರೆತು ಆರ್ಥಿಕವಾಗಿ ಪದೇಪದೇ ಅಭಿವೃದ್ಧಿ ಹೊಂದುತ್ತಿರುವಾಗ ಮಾನವನಿಗೆ ತೋಚುವ ದುರ್ಭಾವನೆಯನ್ನು ಎರಡನೆಯ ವಚನದಲ್ಲಿ ವಿವರಿಸಲಾಗಿದೆ. ನನ್ನ ಸಾಮರ್ಥ್ಯ ಮತ್ತು ಚೆನ್ನಾಗಿ ಆಲೋಚಿಸಿ ವ್ಯಾಪಾರ ನಡೆಸಿದ್ದರಿಂದಾಗಿ ಲಾಭದೊರೆಯಿತೆಂದೂ ಮಾನವನು ಕೆಲವೊಮ್ಮೆ ಜಂಭ ಕೊಚ್ಚಿಕೊಳ್ಳುತ್ತಾನೆ. ಇವೆಲ್ಲವನ್ನೂ ದಯಪಾಲಿಸಿರುವ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಲು ಮರೆತುಬಿಡುತ್ತಾನೆ. ಪಾಲುಗಾರಿಕೆಯಲ್ಲಿ ವ್ಯಾಪಾರ ನಡೆಸುವಾಗ ನಾನು ಹೆಚ್ಚು ಶ್ರಮಿಸುತ್ತಿದ್ದೇನೆ ಮತ್ತು ನನ್ನ ಸಾಮರ್ಥ್ಯದಿಂದಲೇ ವ್ಯಾಪಾರ ಅಭಿವೃದ್ಧಿ ಹೊಂದಿದೆಯೆಂದು ಭಾವಿಸುತ್ತಾ ಎಲ್ಲಾ ಲಾಭವೂ ತನಗೆ ದೊರೆಯ ಬೇಕೆಂಬ ಇಚ್ಛೆಯಿಂದ ಪಾಲು ವ್ಯಾಪಾರವನ್ನು ತೊರೆದು ಸ್ವಂತ ವ್ಯಾಪಾರ ಆರಂಭಿಸಿ ದಿವಾಳಿಯಾಗಿ ಮೊದಲಿನವನು ಅಭಿವೃದ್ಧಿ ಹೊಂದಿದ ಅನೇಕ ಉದಾಹರಣೆಗಳಿವೆ.

ಆದ್ದರಿಂದಲೇ ಅಲ್ಲಾಹನು ತನ್ನ ದಾಸರಲ್ಲಿ ಕೃತಜ್ಞತೆ ತೋರಿಸುವವರು ಬಹಳ ಕಡಿಮೆಯೆಂದು ಹೇಳಿದ್ದಾನೆ.

ಮೇಲಿನ ವಚನಗಳಲ್ಲಿ ಮಾನವರಲ್ಲಿ ಸಾಮಾನ್ಯವಾಗಿ ಕಾಣಿಸುವ ಗುಣವನ್ನು ವಿವರಿಸಲಾಗಿದೆ. ಇಂತಹ ಮಂದಿಗೆ ಇಹಲೋಕದಲ್ಲಿ ಸುಖ ಶಾಂತಿ ದೊರೆಯಲಾರದು. ಪರಲೋಕದಲ್ಲಿ ಕ್ಷೇಮವಿರಲಾರದು.

# ಮಹೋನ್ನತ ಮಾದರಿ

ಅಲ್ಲಾಹನು ಮಾನವನಿಗೆ ಎಷ್ಟೊಂದು ಅನುಗ್ರಹಗಳನ್ನು ದಯಪಾಲಿಸಿರುವನೆಂದು ಯಾರೂ ಆಲೋಚಿಸುವುದಿಲ್ಲ. ಈ ಕೆಳಗಿನ ವಚನದಲ್ಲಿ ಅಲ್ಲಾಹನು ಕೆಲವು ವಿಷಯಗಳನ್ನು ಬೆಟ್ಟು ಮಾಡಿದ್ದಾನೆ. "ನಾವು ಅವನಿಗೆ ಎರಡು ಕಣ್ಣುಗಳನ್ನೂ ಒಂದು ನಾಲಗೆಯನ್ನೂ ಎರಡು ತುಟಿಗಳನ್ನೂ ಕೊಟ್ಟಿಲ್ಲವೇ? ಮತ್ತು ಅವನಿಗೆ ಎರಡು ಸುಸ್ಪಷ್ಟ ದಾರಿಗಳನ್ನು ತೋರಿಸಿ ಕೊಡಲಿಲ್ಲವೇ? ಆದರೆ ಅವನು ದುರ್ಗಮ ಏರನ್ನು ಏರುವ ಸಾಹಸವನ್ನೇ ಮಾಡಲಿಲ್ಲ."

**(ಪವಿತ್ರ ಕುರ್‌ಆನ್, 90:8-11)**

ನಾವು ನಮ್ಮ ಅಂಗಾಂಗಗಳ ಮಹತ್ವವನ್ನು ಗ್ರಹಿಸುವುದಿಲ್ಲ. ಯಾವುದಾದರೊಂದು ಅಂಗ ಕಳೆದು ಹೋದರೆ ಮಾತ್ರ ನಾವು ಅದರ ಬೆಲೆಯನ್ನು ತಿಳಿಯುತ್ತೇವೆ. ಹಠಾತ್ತನೆ ಓರ್ವರು ದೃಷ್ಟಿ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ. ಇರುವ ಸಂಪತ್ತೆಲ್ಲ ವ್ಯಯಿಸಿಯಾದರೂ ದೃಷ್ಟಿ ಮರಳಿ ದೊರೆತರೆ ಸಾಕೆಂದು ಆತನು ಆಶಿಸುವುದಿಲ್ಲವೇ? ಕೆಲವೊಮ್ಮೆ ಸಾಲಪಡೆದು ಅಥವಾ ಮನೆಯನ್ನು ಮಾರಿಯಾದರೂ ಆತನು ಚಿಕಿತ್ಸೆಗೆ ಸಿದ್ಧನಾಗುತ್ತಾನೆ. ಅಂಥ ಸಂದರ್ಭಗಳಲ್ಲಿ ನಾವು ಕಣ್ಣಿಗೆ ನೀಡುವ ಬೆಲೆಯನ್ನು ನಿರ್ಣಯಿಸಲು ಸಾಧ್ಯವಿಲ್ಲ. ಹೀಗೆಯೇ ನಮ್ಮ ಪ್ರತಿಯೊಂದು ಅಂಗಾಂಗಗಳಿಗೆ ಎಷ್ಟೊಂದು ಬೆಲೆಯಿದೆಯೆಂದು ಆಲೋಚಿಸಿ ನೋಡಿರಿ. ಅಂತಹ ಅಮೂಲ್ಯ ಅಂಗಾಂಗಗಳನ್ನು ದಯಪಾಲಿಸಿದ ಅಲ್ಲಾಹನಿಗೆ ನಾವು ಅದೆಷ್ಟು ಋಣಿಯಾಗಿರಬೇಕು. ಅದೆಷ್ಟು ಕೃತಜ್ಞರಾಗಿರಬೇಕು!

ಈ ಹಿಂದೆ ಸೂಚಿಸಿದ ಕುರ್‌ಆನ್ ವಚನದಲ್ಲಿ ಎರಡು ಮೂರು ಅಂಗಾಂಗಗಳ ಬಗ್ಗೆ ಮಾತ್ರ ಹೇಳಲಾಗಿದೆ. ಅದರೊಂದಿಗೆ ಎರಡು ಸುಸ್ಪಷ್ಟ ಹಾದಿಗಳನ್ನೂ ತೋರಿಸಲಾಗಿದೆಯೆಂದು ಹೇಳಲಾಗಿದೆ. ಸರಿಯಾದ ದಾರಿ ಮತ್ತು ತಪ್ಪು ದಾರಿ. ಸರಿಯಾದ ಹಾದಿಯನ್ನು ಆಯ್ಕೆ ಮಾಡಬೇಕೆಂದು ಹೇಳಲಾಗಿದೆ. ಅನಂತರದ ವಚನದಲ್ಲಿ ಪರ್ವತದ ಶಿಖರಕ್ಕೆ ಏರುವ ಸಾಹಸವನ್ನು ಮಾಡಲಿಲ್ಲವೆನ್ನಲಾಗಿದೆ. ಗುಲಾಮರ ರಕ್ಷಣೆ, ಅನಾಥರು ಮತ್ತು ನಿರ್ಗತಿಕರಿಗೆ ಆಹಾರ ನೀಡುವುದು ಇತ್ಯಾದಿ ಕರ್ಮಗಳನ್ನು ಎತ್ತರಕ್ಕೆ ಏರುವ ದಾರಿಯೆಂದು ಮುಂದಿನ ವಚನದಲ್ಲಿ ಹೇಳಲಾಗಿದೆ.

ಹೆಲೆನ್ ಕಿಲ್ಲರ್ ಎಂಬ ಬಾಲೆಯ ಕುರಿತು ಕೇಳಿರುವಿರಲ್ಲವೇ? ಹುಟ್ಟಿ 29 ತಿಂಗಳು ಗಳಾದಾಗ ಒಂದು ಮಾರಕ ಕಾಯಿಲೆಯಿಂದಾಗಿ ಆ ಪುಟ್ಟ ಮಗುವು ದೃಷ್ಟಿ ಮತ್ತು ಶ್ರವಣ

ಶಕ್ತಿಯನ್ನು ಕಳೆದುಕೊಂಡಿತು. ಶೀಘ್ರದಲ್ಲಿಯೇ ಮಾತು ಬಾರದಾಯಿತು. ನಿರಂತರ ಚಿಕಿತ್ಸೆ ನಡೆಸಿಯೂ ಪ್ರಯೋಜನವಾಗಲಿಲ್ಲ. ಈ ಹಂತದಲ್ಲಿ ಕಿವುಡ, ಮೂಗ ಮತ್ತು ಅಂಧರಿಗೆ ವಿದ್ಯೆ ಕಲಿಸುವ ವಿಶೇಷ ತರಬೇತಿ ಪಡೆದ ಓರ್ವ ಅಧ್ಯಾಪಿಕೆಯು ಹೆಲೆನ್‌ಳ ಜತೆ ಸೇರಿದರು. ಅವರಿಂದ ಹೆಲೆನ್ ಬ್ರೈಲಿ ಭಾಷೆಯನ್ನು ಕಲಿತಳು. 11ನೆಯ ವಯಸ್ಸಿನಲ್ಲಿಯೇ ಬ್ರೈಲಿ ಟೈಪ್ ರೈಟರ್‌ನ ಸಹಾಯದಿಂದ ತನ್ನ ಮನಸ್ಸಿನ ವಿಚಾರಗಳನ್ನು ಕಾಗದದಲ್ಲಿ ದಾಖಲಿಸಲು ಸಾಧ್ಯವಾಯಿತು. 37 ವಯಸ್ಸಿನಲ್ಲಿ ಗ್ರೀಕ್, ಫ್ರೆಂಚ್, ಇಂಗ್ಲಿಷ್ ಮತ್ತು ಜರ್ಮನಿ ಭಾಷೆಯ ಪರೀಕ್ಷೆಗಳಲ್ಲಿ ಬಹಳ ಉನ್ನತ ಮಟ್ಟದಲ್ಲಿ ಹೆಲೆನ್ ಪಾಸಾದಳು. ಇಂಗ್ಲಿಷ್ ಮತ್ತು ಜರ್ಮನ್ ಭಾಷೆಯಲ್ಲಿ ಗೌರವ ಬಿರುದನ್ನೂ ಪಡೆದಳು.

ಅಂಧಳಾಗಿದ್ದ ಹೆಲೆನ್‌ಳು ದೃಷ್ಟಿ ಶಕ್ತಿಯಿರುವವರೊಡನೆ ಹೇಳಿದ ಮಾತುಗಳು ಹೀಗಿವೆ: "ನೀವು ನಾಳೆ ಅಂಧರಾಗಿ ಬಿಡಬಹುದೆಂಬ ವಿಷಯವನ್ನು ಗಮನದಲ್ಲಿರಿಸಿ ನಿಮ್ಮ ಕಣ್ಣುಗಳನ್ನು ಉಪಯೋಗಿಸಿರಿ. ಇತರ ಇಂದ್ರಿಯಗಳ ಬಗ್ಗೆಯೂ ಇದೇ ರೀತಿ ಹೇಳಬಹುದು. ನೀವು ನಾಳೆ ಕಿವುಡರಾಗಿ ಬಿಡಬಹುದೆಂಬ ಆಲೋಚನೆಯಿಂದ ಶಬ್ದಗಳ ಸಂಗೀತವನ್ನೂ ಪಕ್ಷಿಗಳ ಕಲರವವನ್ನೂ ಸಂಗೀತ ಕಚೇರಿಯ ನಾದವನ್ನೂ ಕೇಳಿ ಸವಿಯಿರಿ. ಪುಷ್ಪಗಳ ಕಂಪನ್ನು ಆಸ್ವಾದಿಸಿರಿ-ಹೀಗೆ ಜಗತ್ತು ಬಹಿರಂಗ ಪಡಿಸುವ ಎಲ್ಲ ಸಂತೋಷ ಮತ್ತು ಸೌಂದರ್ಯದ ಎಲ್ಲ ಅಂಶಗಳನ್ನೂ ಅನುಭವಿಸಿ ತಿಳಿಯಿರಿ."

ತರುವಾಯ ಹೆಲೆನ್‌ಳು ತನ್ನ ಜೀವನವನ್ನು ಕಿವುಡರು ಮತ್ತು ಮೂಗರಿಗೆ ಕಲಿಸುವುದಕ್ಕಾಗಿ ವಿನಿಯೋಗಿಸಿದಳು. ಆ ಜೀವನದಿಂದ ಆಕೆಯು ಆನಂದ ಪಡೆದು ಯಶಸ್ವಿಯಾದಳು.

ಹೆಲೆನ್‌ಳು ಓರ್ವ ಗೆಳತಿಗೆ ಬರೆದ ಪತ್ರದಲ್ಲಿ ಹೀಗೆ ಉಲ್ಲೇಖಿಸಿದ್ದಾಳೆ: "ಜೀವನವು ಒಂದು ವಿಸ್ಮಯಕಾರಿ ಆಟವೆಂದು ನಾವಿಬ್ಬರೂ ನಂಬುತ್ತೇವೆ. ನಾನು ಆ ಆಟದ ಅಂತ್ಯದ ತನಕ ಹೋರಾಡಲು ನಿರ್ಧರಿಸಿದ್ದೇನೆ. ಧೈರ್ಯ ಮತ್ತು ತಾಳ್ಮೆಯೇ ಎಲ್ಲ ದುಃಖಗಳಿಂದಲೂ ವಿಮೋಚನೆ ಪಡೆಯುವ ಏಕೈಕ ದಾರಿ. "ಶ್ರವಣ, ದೃಶ್ಯ ಮತ್ತು ಮಾತಿನ ಶಕ್ತಿಯನ್ನು ಕಳೆದು ಕೊಂಡಿದ್ದರೂ ನೀವು ಅದ್ಹೇಗೆ ಇಷ್ಟೊಂದು ಸಂತೃಪ್ತರಾಗಿದ್ದೀರಿ" ಎಂದು ಪ್ರಯಾಣದ ಮಧ್ಯೆ ಯಾರೋ ಹೆಲೆನ್‌ಳನ್ನು ಪ್ರಶ್ನಿಸಿದರು. ಆಕೆ ನೀಡಿದ ಉತ್ತರವು ಎಲ್ಲರನ್ನೂ ಚಕಿತಗೊಳಿಸಿತು. "ದೇವನು ನನ್ನ ಕೈಕಾಲುಗಳಿಗೆ ಉತ್ತಮ ಶಕ್ತಿಯನ್ನು ನೀಡಿದ್ದಾನೆ. ಉತ್ತಮ ಆರೋಗ್ಯವನ್ನು ನೀಡಿದ್ದಾನೆ. ಆಲೋಚಿಸಿ ಗ್ರಹಿಸುವ ಬುದ್ಧಿ ಶಕ್ತಿಯನ್ನು ನೀಡಿದ್ದಾನೆ. ಹೀಗೆ ಅನೇಕ ಉಪಕಾರ ಗಳನ್ನು ದಯಪಾಲಿಸಿರುವ ದೇವನಿಗೆ ಕೃತಜ್ಞತೆ ಸಲ್ಲಿಸಬೇಡವೇ?" ಅನಂತರ ಬಹಳ ನಿರ್ಲಿಪ್ತವಾಗಿ ಹೇಳಿದಳು: "ಮತ್ತೆ ಪಂಚೇಂದ್ರಿಯಗಳ ಪೈಕಿ ಮೂರಕ್ಕೆ ಮಾತ್ರ ತೊಂದರೆಯಿದೆ ಯಷ್ಟೆ." ಈ ಮನೋಭಾವವೇ ಔನ್ನತ್ಯಕ್ಕೇರಿದ ಹೆಲೆನ್‌ಳ ಜೀವನದ ಗುಟ್ಟು.

ದ್ವಿತೀಯ ಖಲೀಫರಾದ ಉಮರ್‌ರ(ರ) ಚರಿತ್ರೆ ನಮಗೆ ತಿಳಿದಿದೆಯಲ್ಲವೇ. ಅವರು ಕೇವಲ ಓರ್ವ ಸಾಮಾನ್ಯ ಯೋಧನ ಸಂಬಳ ಪಡೆದು, ಬಹಳ ಸರಳ ಜೀವನ ನಡೆಸಿ ಸಂಪೂರ್ಣ ಸಮಯವನ್ನು ಜನಸೇವೆಗಾಗಿ ಮುಡಿಪಾಗಿಟ್ಟು, ಜೀವನದಲ್ಲಿ ಶಾಂತಿ

ನೆಮ್ಮದಿಯನ್ನು ಪಡೆದ ಮಹಾತ್ಮರಾಗಿದ್ದರು. ದೊಡ್ಡ ಅರಮನೆ, ಬೆಲೆಬಾಳುವ ಉಡುಪು ಅಥವಾ ಉತ್ತಮ ಭಕ್ಷ್ಯ ಪದಾರ್ಥಗಳಿಂದ ನನಗೆ ಸಂತುಷ್ಟಿಯಾದೀತೆಂದು ಅವರು ನಂಬಲಿಲ್ಲ. ತನಗೆ ಅಲ್ಲಾಹನು ದಯಪಾಲಿಸಿದ ಅನುಗ್ರಹಗಳಿಂದ ಅವರು ಸಂತೃಪ್ತರಾಗಿದ್ದರು. ಅದಕ್ಕಾಗಿ ಅಲ್ಲಾಹನಿಗೆ ಅವರು ಕೃತಜ್ಞರಾಗಿದ್ದರು.

(ಸನ್ಮಾರ್ಗದ ಪ್ರಧಾನ ಸಂಪಾದಕರು ಮತ್ತು ಜಮಾಅತೆ ಇಸ್ಲಾಮಿ ಹಿಂದ್ ಕರ್ನಾಟಕ ಮತ್ತು ಗೋವಾ ಅಧ್ಯಕ್ಷರಾಗಿದ್ದ ಮರ್ಹೂಮ್ ಇಬ್ರಾಹೀಮ್ ಸಈದ್‌ರು, ಮಾರಕ ಅರ್ಬುದ ರೋಗವು ಶ್ವಾಸಕೋಶವನ್ನು ಆವರಿಸಿದೆಯೆಂದು ತಿಳಿದ ಬಳಿಕವೂ ಹತಾಶರಾಗಲಿಲ್ಲ. ತಮ್ಮ ದೈನಂದಿನ ಕಾರ್ಯ ಚಟುವಟಿಕೆಗಳಿಗೆ ಅದು ಅಡ್ಡಿಯಾಗಲಿಲ್ಲ. ಸಂಘಟನೆಯ ಕೆಲಸ ಕಾರ್ಯಗಳಲ್ಲಿ ಅವರು ಸಕ್ರಿಯರಾಗಿದ್ದರು. ತರಬೇತಿ ಮತ್ತು ಸಾರ್ವಜನಿಕ ಸಭೆಗಳಲ್ಲಿ ಆಸಕ್ತಿಯಿಂದ ಭಾಗವಹಿಸಿದರು. ತನ್ನನ್ನು ಭೇಟಿಯಾಗಲು ಬಂದವರೊಡನೆ ನಗುಮುಖದಿಂದ ಮಾತಾಡಿ ಕುಶಲ ವಿಚಾರಿಸುತ್ತಿದ್ದರು. ಅವರು ವಿಧಿಯನ್ನು ಹಳಿಯಲಿಲ್ಲ. ಯಾರೊಂದಿಗೂ ತನ್ನ ನೋವಿನ ಬಗ್ಗೆ ಪರಿತಪಿಸಲಿಲ್ಲ. ಅವರು ಅಷ್ಟೊಂದು ಸಂತೃಪ್ತಿಯ ಬಾಳು ಬಾಳಿದ್ದರು. -ಅನು)

ಸೌಭಾಗ್ಯದಿಂದ ಅಮಿತ ಆನಂದಪಡಬಾರದೆಂದು ಕುರ್‌ಆನ್ ನಮಗೆ ಕಲಿಸುತ್ತದೆ. ಆ ರೀತಿ ಆನಂದಿಸಿದರೆ ದೌರ್ಭಾಗ್ಯದ ಸಂದರ್ಭದಲ್ಲಿ ಹೆಚ್ಚು ದುಃಖಿಸಬೇಕಾಗಿದೆ ಎಂಬುದೇ ಅದಕ್ಕೆ ಕಾರಣವಾಗಿದೆ. ಮಾನವನ ಸ್ವಭಾವವನ್ನು ಕುರ್‌ಆನ್ ಹೀಗೆ ಪ್ರತಿಪಾದಿಸಿದೆ:

"ಅವನ ಮೇಲೆ ಬಂದಿದ್ದ ಕಷ್ಟಗಳ ಅನಂತರ ನಾವು ಅವನಿಗೆ 'ಸೌಭಾಗ್ಯ'ಗಳ ಸವಿಯನ್ನುಣಿಸಿದಾಗ ಅವನು ನನ್ನ ಎಲ್ಲಾ ದುರದೃಷ್ಟಗಳೂ ತೊಲಗಿದುವು ಎನ್ನುತ್ತಾನೆ. ಅನಂತರ ಅವನು ಆನಂದ ತುಂದಿಲನಾಗುತ್ತಾನೆ ಮತ್ತು ಅಹಂಕಾರಪಡುತ್ತಾನೆ."

(ಪವಿತ್ರ ಕುರ್‌ಆನ್, 11:10)

ಇವೆಲ್ಲವೂ ಅಲ್ಲಾಹನು ನಮ್ಮ ಮುಂದೆ ಸಮರ್ಪಿಸಿರುವ ಮಾದರಿಗಳಾಗಿವೆ. ಈ ಮಾದರಿಗಳಿಂದ ನಾವು ಪಾಠ ಕಲಿಯಬೇಕು. ಹೆಲನ್ ಕಿಲ್ಲರ್‌ಳ ಆತ್ಮವಿಶ್ವಾಸ, ಖಲೀಫಾ ಉಮರ್‌ರ(ರ) ಜೀವನ ಸರಳತೆ ಮತ್ತು ಇಬ್ರಾಹೀಮ್ ಸಈದ್‌ರ ಮನೋ ಸ್ಥೈರ್ಯ ನಮ್ಮ ಬದುಕಿಗೆ ಮಾರ್ಗದರ್ಶಕವಾಗಬೇಕು. ಈ ಮಾದರಿಗಳು ಜೀವನದ ಹಾದಿಯಲ್ಲಿ ಚೆಲ್ಲಿರುವ ಬೆಳಕಿನ ಮೂಲಕ ನಾವು ಸಂಚರಿಸಬೇಕು.

ಸುಖ ಮತ್ತು ದುಃಖ, ಸೌಲಭ್ಯ ಮತ್ತು ಸಂಕಟ, ಆರೋಗ್ಯ ಮತ್ತು ರೋಗ, ಜನನ ಮತ್ತು ಮರಣ ಎಲ್ಲವೂ ಅಲ್ಲಾಹನ ನಿರ್ಣಯವೆಂದು ನಾವು ತಿಳಿಯಬೇಕು. ಆದ್ದರಿಂದ ಸುಸ್ಥಿತಿಯ ಕಾಲದಲ್ಲಿ ಸಂಪತ್ಸಮೃದ್ಧಿ ಉಂಟಾದಾಗ ಅತಿಯಾಗಿ ಆನಂದಿಸಬಾರದು ಮತ್ತು ಅಹಂಕಾರ ಪಡಬಾರದು. ಬದಲಾಗಿ ಅವೆಲ್ಲವನ್ನೂ ನೀಡಿರುವ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು. ಹಾಗಾದರೆ ಮಾತ್ರ ಪ್ರತಿಕೂಲ ಪರಿಸ್ಥಿತಿಯಲ್ಲಿ ಹತಾಶರಾಗದೆ ತೀವ್ರವಾಗಿ ದುಃಖಿಸದೆ ತಾಳ್ಮೆ ಮತ್ತು ಆತ್ಮನಿಯಂತ್ರಣದಿಂದ ಅದನ್ನು ಎದುರಿಸಲು ನಮಗೆ ಸಾಧ್ಯವಾದೀತು.

ଓ•ଥ

# ಆಶೆ ಮತ್ತು ನಿರಾಶೆ

ನಾವು ನಮಗಿಂತ ಸೌಭಾಗ್ಯದಲ್ಲಿರುವವರನ್ನು ನೋಡಿ ಒಮ್ಮೆಯೂ ನಿರಾಶರಾಗ ಬಾರದು. ಬದಲಾಗಿ ಸೌಭಾಗ್ಯ ಕಡಿಮೆಯಿರುವವರನ್ನು ನೋಡಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು. ಈ ಕುರಿತು ಕುರ್‌ಆನ್ ನೀಡಿರುವ ಮಾರ್ಗದರ್ಶನವನ್ನು ನಾವು ಪರಿಶೀಲಿಸೋಣ.

**"ನಾವು ಇವರ ಪೈಕಿ ನಾನಾ ವಿಧದ ಜನರಿಗೆ ನೀಡುವ ಐಹಿಕ ಭೋಗ ವಿಲಾಸಗಳತ್ತ ಕಣ್ಣೆತ್ತಿಯೂ ನೋಡಬೇಡಿರಿ. ಅವುಗಳನ್ನಂತು ನಾವು ಪರೀಕ್ಷಿಸಲಿಕ್ಕಾಗಿ ಅವರಿಗೆ ಕೊಟ್ಟಿರುತ್ತೇವೆ ಮತ್ತು ನಿನ್ನ ಪ್ರಭು ನೀಡಿರುವ ಧರ್ಮಸಮ್ಮತ ಜೀವನಾಧಾರವೇ ಶ್ರೇಷ್ಠವೂ ಶಾಶ್ವತವೂ ಆಗಿರುತ್ತದೆ."**

**(ಪವಿತ್ರ ಕುರ್‌ಆನ್, 20:131)**

ಅತ್ಯವಶ್ಯಕ ಸೌಲಭ್ಯವಿರುವ ಸ್ವಂತ ಮನೆಯಿರುವಾಗ ನಮ್ಮ ಪೈಕಿ ಹೆಚ್ಚಿನವರು ಅದಕ್ಕಿಂತ ಸೌಲಭ್ಯವಿರುವ ಇತರರ ಮನೆಯನ್ನು ನೋಡಿ ನಿರಾಶರಾಗಿ ಪರಿತಪಿಸುತ್ತಾರೆ. ಅದರ ಬದಲಿಗೆ ನಮ್ಮ ಮನೆಗಿಂತ ಚಿಕ್ಕ ಮತ್ತು ಸೌಲಭ್ಯ ಕಡಿಮೆಯಿರುವ ಮನೆಯನ್ನು ನೋಡಿ, "ನಾನೆಷ್ಟು ಭಾಗ್ಯಶಾಲಿ, ನನ್ನ ಮನೆಯು ಅದಕ್ಕಿಂತ ಎಷ್ಟು ಚೆನ್ನ ಎಂದು ಆಲೋಚಿಸಿ ಸಂತೃಪ್ತರಾದರೆ? ಹೀಗೆ ಸಂತೃಪ್ತರಾಗಿ ತಮಗೆ ದೊರೆತ ಸೌಭಾಗ್ಯಗಳಿಗಾಗಿ ಅಲ್ಲಾಹನಿಗೆ ಕೃತಜ್ಞತೆ ಹೇಳುವವರು ಅದೆಷ್ಟು ಮಂದಿ ಇದ್ದಾರೆ? ಹಾಗೆಯೇ ಸಣ್ಣ ಕಾಯಿಲೆ ಬಂದಾಗ ಹತಾಶರಾಗಿ ಪ್ರಲಾಪಿಸುವ ಬದಲು ಅದಕ್ಕಿಂತ ದೊಡ್ಡರೋಗ ತಗಲಿದವರನ್ನು ನೋಡಿ ಸಮಾಧಾನ ಪಡುವುದೇ ಉತ್ತಮವಲ್ಲವೇ?

ಒಂದು ದಿನ ವಿದ್ಯುತ್ ಕೈಕೊಟ್ಟರೆ ಚಡಪಡಿಸಿ ದೂರುವ ನಾವು ವಿದ್ಯುತ್ ಸೌಲಭ್ಯ ವಿಲ್ಲದೆ ಜೀವಿಸುವ ಅದೆಷ್ಟೋ ಮಂದಿಯಿದ್ದಾರೆ ಎಂಬುದನ್ನು ಜ್ಞಾಪಿಸುವುದಿಲ್ಲ. ಹೀಗೆ ಆಲೋಚಿಸಿ ಸಮಾಧಾನ ಪಟ್ಟು ನಮಗೆ ದೊರೆತ ಅನುಗ್ರಹಕ್ಕಾಗಿ ಕೃತಜ್ಞತೆ ಹೇಳುವುದೇ ಸರಿಯಾದ ವಿಧಾನವಾಗಿದೆ. ಹಾಗೆಯೇ ಮನೆಯ ಆಧುನಿಕ ಟಾಯ್ಲೆಟ್ ಸ್ವಲ್ಪ ಕೆಟ್ಟು ಹೋದರೆ ಪರಿತಪಿಸುವ ನಾವು ಸ್ವಂತ ಪಾಯಿಖಾನೆಯಿಲ್ಲದೆ ರಾತ್ರಿಕಾಲದಲ್ಲಿ ಚರಂಡಿಗಳಲ್ಲಿ ಮಲ ವಿಸರ್ಜನೆ ಮಾಡುವವರ ಅವಸ್ಥೆಯ ಬಗ್ಗೆ ಚಿಂತಿಸುವುದಿಲ್ಲ. ಅಹವಾಲುಗಳನ್ನು ಹೇಳಿ ಪ್ರಲಾಪಿಸುವ ಹೊರತು ಅನುಗ್ರಹಗಳಿಗಾಗಿ ಕೃತಜ್ಞತೆ ಹೇಳಲು ನಾವು ಮುಂದಾಗುವುದಿಲ್ಲ. ಒಟ್ಟಿನಲ್ಲಿ ಹೆಚ್ಚಿನವರು ಕಷ್ಟದ ಜೀವನವನ್ನು ಮತ್ತಷ್ಟು ಸಂಕಷ್ಟಮಯಗೊಳಿಸುತ್ತಾರೆ.

ಈ ನೀತಿಯನ್ನು ಕುರ್‌ಆನಿನ ಇನ್ನೊಂದು ವಚನವು ನಮಗೆ ಜ್ಞಾಪಿಸಿಕೊಡುತ್ತದೆ.

**"ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಇನ್ನು ಕೆಲವರಿಗಿಂತ ಅಧಿಕವಾಗಿ ನೀಡಿದ್ದರೆ ಅದಕ್ಕಾಗಿ ಆಶೆ ಪಡಬೇಡಿರಿ. ಪುರುಷರು ಗಳಿಸಿದುದಕ್ಕನುಸಾರವಾದ ಪಾಲು ಅವರಿಗಿದೆ, ಸ್ತ್ರೀಯರು ಗಳಿಸಿದುದಕ್ಕನುಸಾರವಾದ ಪಾಲು ಅವರಿಗಿದೆ. ಅಲ್ಲಾಹನೊಡನೆ ಅವನ ಅನುಗ್ರಹವನ್ನು ಯಾಚಿಸುತ್ತಲಿರಿ. ನಿಶ್ಚಯವಾಗಿಯೂ ಅಲ್ಲಾಹನು ಎಲ್ಲಾ ಸಂಗತಿಗಳ ಅರಿವುಳ್ಳವನಾಗಿರುತ್ತಾನೆ."** **(ಪವಿತ್ರ ಕುರ್‌ಆನ್, 4:32)**

ಅಲ್ಲಾಹನೊಡನೆ ಯಾಚಿಸಬೇಕಾದ ಔದಾರ್ಯವು ಇಹಪರಗಳ ಒಳಿತಾಗಿದೆ. ಸರಿಯಾದ ಸತ್ಕರ್ಮಗಳೊಂದಿಗಿನ ಸಂತೃಪ್ತ ಜೀವನವು ಇಹದ ಒಳಿತಾಗಿದೆ. ಪರದಲ್ಲಿ, ಸಂಕಷ್ಟವಿಲ್ಲದ ಜೀವನವಾಗಿದೆ. ನಾವು ಮಾಡುವ ಉಪಕಾರಗಳು ಪ್ರತ್ಯುಪಕಾರದ ನಿರೀಕ್ಷೆಯಿಂದಾಗಿರಬಾರದು. ಕುರ್‌ಆನ್ ಹೇಳುತ್ತದೆ: **"ಅವನು ಪ್ರತಿಫಲ ಕೊಡಬೇಕಾದಂತಹ ಯಾರ, ಯಾವ ಉಪಕಾರ ಭಾರವೂ ಅವನ ಮೇಲಿಲ್ಲ- ಅವನಂತು ಕೇವಲ ತನ್ನ ಸರ್ವೋನ್ನತ ಪ್ರಭುವಿನ ಪ್ರಸನ್ನತೆಗಾಗಿ ಈ ಕಾರ್ಯವನ್ನು ಮಾಡುತ್ತಾನೆ. ಮತ್ತು ಅವನು ಖಂಡಿತವಾಗಿಯೂ (ಇವನಿಂದ) ಪ್ರಸನ್ನನಾಗುವನು."**

**(ಪವಿತ್ರ ಕುರ್‌ಆನ್, 92:19-21)**

ಜೀವನದಲ್ಲಿ ಜಾಗ್ರತೆ ಪಾಲಿಸುವವರ ಕುರಿತು ಇಲ್ಲಿ ಹೇಳಲಾಗಿದೆ. ಅಲ್ಲಾಹನ ಸಂಪ್ರೀತಿಯ ಬಯಕೆಯಿಂದ ಹೊರತು ಪ್ರತ್ಯುಪಕಾರದ ನಿರೀಕ್ಷೆಯಿಂದ ಈ ಮಂದಿ ಯಾರೊಬ್ಬರಿಗೂ ಪ್ರತ್ಯುಪಕಾರವನ್ನು ಮಾಡಲಾರರು. ಆಪ್ತ ಮಿತ್ರರು, ಸಂಬಂಧಿಕರು ಮತ್ತು ಸಂತಾನಗಳಿಂದಲೂ ನಾವು ಪ್ರತ್ಯುಪಕಾರವನ್ನು ನಿರೀಕ್ಷಿಸಬಾರದು. ನಾವು ನಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವುದು ನಮ್ಮ ಕರ್ತವ್ಯ ನಿರ್ವಹಣೆಯಾಗಿದೆ. ಬದಲಾಗಿ ವಾರ್ಧಕ್ಯದಲ್ಲಿ ನಮಗೆ ಸಹಾಯ ದೊರೆಯಬಹುದೆಂದು ಒಮ್ಮೆಯೂ ನಿರೀಕ್ಷಿಸಬಾರದು. ಹೀಗೆ ನಿರೀಕ್ಷಿಸಿದರೆ ನಮ್ಮ ನಿರೀಕ್ಷೆ ಪ್ರಕಾರ ನೆರವು ದೊರೆಯದಿದ್ದರೆ ನಾವು ನಿರಾಶರಾಗಬೇಕಾದೀತು.

ಕೆಲ ವರ್ಷಗಳ ಹಿಂದೆ ಶ್ರೀಮಂತ, ಧರ್ಮಿಷ್ಠ ಮತ್ತು ಸಮಾಜ ಸೇವಕನಾಗಿದ್ದ ಓರ್ವ ಮಿತ್ರನ ಬಳಿಗೆ ಹೋಗಿದ್ದೆ.

ನಾನು ವಿಚಾರಿಸಿದೆ:

"ನಿಮಗೆ ಹುಷಾರಿಲ್ಲವೇ?"

"ತೊಂದರೆಯಿಲ್ಲ, ಸುಖವಾಗಿದ್ದೇನೆ." ಆತ ಉತ್ತರಿಸಿದ.

"ಆದರೆ, ಮುಖಬಾಡಿದೆ. ನೀವು ಬಹಳ ಕ್ಷೀಣಿಸಿರುವಂತೆ ತೋರುತ್ತಿದೆಯಲ್ಲಾ?"

"ಇಲ್ಲ, ಏನಿಲ್ಲ, ನಾನು ಯಾರಿಗೂ ಯಾವ ಉಪದ್ರವವನ್ನೂ ಮಾಡುವುದಿಲ್ಲ."

"ಮಾಡಿದ್ದೀರಿ ಅಂತ ಈಗ ಯಾರು ಹೇಳಿದರು?"

"ಆದಷ್ಟು ಉಪಕಾರವನ್ನೇ ಮಾಡುತ್ತಿದ್ದೇನೆ" ಅನಂತರ ಅವರು ಗದ್ಗದಿತರಾಗಿ ಮಾತು ಮುಂದುವರಿಸಿದರು. ನನಗೆ ಅವರು ಏನು ಹೇಳುತ್ತಿರುವರೆಂದೇ ಅರ್ಥವಾಗುತ್ತಿರಲಿಲ್ಲ.

"ದೇವನು ನನ್ನನ್ನು ಯಾಕೆ ಹೀಗೆ ಪರೀಕ್ಷಿಸುತ್ತಿದ್ದಾನೆ?" ಅವರು ಕೇಳಿದರು.

"ನಿಮ್ಮನ್ನು ಪರೀಕ್ಷಿಸುತ್ತಿದ್ದಾನೆಯೇ? ನಮ್ಮ ಅಭಿಪ್ರಾಯದಲ್ಲಿ ನೀವು ಮಹಾ ಭಾಗ್ಯಶಾಲಿಗಳಾಗಿದ್ದೀರಿ. ಅಪಾರ ಸೊತ್ತಿದೆ. ಹಣವಿದೆ. ದೊಡ್ಡ ವ್ಯಾಪಾರವಿದೆ. ಎಲ್ಲ ರೀತಿಯಿಂದಲೂ ಅಲ್ಲಾಹನು ನಿಮ್ಮನ್ನು ಅನುಗ್ರಹಿಸಿದ್ದಾನಲ್ಲವೇ?"

"ಹೂಂ" ಅವರು ಕೇವಲ ದೀರ್ಘವಾಗಿ ಹೂಂಗುಟ್ಟಿದರು.

"ನಾನು ಹೇಳಿದ್ದು ನಿಜವಲ್ಲವೇ? ಗುಣಸಂಪನ್ನೆಯಾಗಿರುವ ಪತ್ನಿ; ಮಗನಾದರೋ ಇಂಜಿನಿಯರ್, ದೊಡ್ಡ ಅಳಿಯ ಗಲ್ಫ್‌ನಲ್ಲಿ ಉನ್ನತ ಹುದ್ದೆಯಲ್ಲಿದ್ದಾನೆ., ಸುಂದರ ಮತ್ತು ವಿದ್ಯಾವಂತ. ದ್ವಿತೀಯ ಪುತ್ರಿಯನ್ನು ಓರ್ವ ಡಾಕ್ಟರ್ ವಿವಾಹವಾಗಲಿದ್ದಾರೆ. ನಿಮ್ಮ ಸ್ವಂತ ಅಳಿಯ. ಆತ ಬಹಳ ಸಮರ್ಥನೆಂದು ಕೇಳಿದ್ದೇನೆ."

"ನೀವು ಹೇಳಿದ್ದೆಲ್ಲ ನಿಜ. ಆದರೆ ಕೊನೆಗೆ ಹೇಳಿದ್ದು ನಡೆಯುವುದಿಲ್ಲ."

"ಯಾವುದು, ಎರಡನೆಯ ಮಗಳ ವಿವಾಹವೇ ಕಾರಣವೇನು? ನಿಮಗೆ ಅದು ಇಷ್ಟವಿಲ್ಲವೇ?"

"ಯಾವ ತೊಂದರೆಯೂ ಇಲ್ಲ. ಎಲ್ಲರಿಗೂ ಒಪ್ಪಿಗೆಯಿದೆ. ಸಂತೋಷವಿದೆ."

"ಮತ್ತೇನು?"

"ವಿವಾಹವಾಗುವ ವ್ಯಕ್ತಿ ಒಪ್ಪಬೇಡವೇ?"

"ಏನು ನಿಮ್ಮ ಅಳಿಯ ಒಪ್ಪಿಲ್ಲವೇ?"

"ಇಲ್ಲ"

"ಒಪ್ಪಿಗೆಯಿಲ್ಲವೇ? ಆತನಿಗೆ ಇದಕ್ಕಿಂತ ಉತ್ತಮ ಸಂಬಂಧ ಬೇರೆಲ್ಲಿ ದೊರೆತೀತು?"

"ಆತನಿಗೆ ನನ್ನ ಮಗಳನ್ನು ಕೇವಲ ಓರ್ವ ಸಹೋದರಿಯೆಂದು ಭಾವಿಸಲು ಸಾಧ್ಯವಿದೆಯಂತೆ. ಹೆಂಡತಿಯೆಂದು ಸಂಕಲ್ಪಿಸಲೂ ಸಾಧ್ಯವಿಲ್ಲವಂತೆ."

"ಓಹೋ, ಹಾಗೋ ವಿಷಯ. ಅದು ಸರಿಯಾಗಿರಬಹುದು. ಚಿಕ್ಕಂದಿನಲ್ಲಿ ಅವರು ಒಟ್ಟಿಗೆ ಬೆಳೆದವರಲ್ಲವೇ? ಅಣ್ಣ ತಂಗಿಯರಂತೆ. ಆದ್ದರಿಂದ ಆತನಿಗೆ ತಂಗಿಗಿಂತ ಬೇರೆ ರೀತಿಯಲ್ಲಿ ಭಾವಿಸಲು ಸಾಧ್ಯವಾಗುತ್ತಿಲ್ಲದಿರಬಹುದು. ಅದು ಕಾರಣವೆಂದಾದರೆ ನನಗೆ ಅದು ತಪ್ಪೆನಿಸುವುದಿಲ್ಲ."

"ತಪ್ಪಿಲ್ಲದಿರಬಹುದು. ಹಾಗಿದ್ದರೂ ಆತ ನನ್ನೊಡನೆ ಆ ರೀತಿ ಹೇಳಬಹುದೆಂದು ನಾನು ನಿರೀಕ್ಷಿಸಿರಲಿಲ್ಲ."

"ಒಂದು ರೀತಿಯಲ್ಲಿ ಆತ ಈಗಲೇ ವಿಷಯವನ್ನು ಹೇಳಿದ್ದು ಉತ್ತಮವಾಯಿತು. ಅದರ ಬದಲಾಗಿ ವಿವಾಹವಾದ ಬಳಿಕ ಪರಸ್ಪರ ಬೆರೆಯಲು ಸಾಧ್ಯವಾಗದಿರುತ್ತಿದ್ದರೆ..... ಈ ವಿಷಯದಲ್ಲಿ ನೀವು ಕಿಂಚಿತ್ತೂ ಬೇಸರಿಸುವ ಅಗತ್ಯವಿದೆ ಎನಿಸುವುದಿಲ್ಲ. ಇದು ನಿಮ್ಮ ಹಿತಕ್ಕೆಂದು ಭಾವಿಸಿ ಸಂತೋಷಪಡಲು ಪ್ರಯತ್ನಿಸಬೇಕು."

"ನೀವು ಸುಲಭದಲ್ಲಿ ಹಾಗೆ ಹೇಳಿ ಬಿಡಬಹುದು. ನಿಮಗೆ ಹೀಗೆ ಸಂಭವಿಸುತ್ತಿದ್ದರೆ ಆಗ ತಿಳಿಯುತ್ತಿತ್ತು. ನಿಮಗೆ ತಿಳಿದಿಲ್ಲವೇ, ನಾನು ಆತನನ್ನು ನನ್ನ ಮಗನಂತೆಯೇ ಭಾವಿಸಿದ್ದೆ.

ಆತನ ವಿದ್ಯಾಭ್ಯಾಸದ ಎಲ್ಲ ವೆಚ್ಚವನ್ನೂ ನಾನೇ ವಹಿಸಿದ್ದೇನೆ. ಆತನಿಂದ ನಾನು ಒಂದು ಪೈಸೆಯೂ ಖರ್ಚು ಮಾಡಿಸಿಲ್ಲ. ಹೌಸ್ ಸರ್ಜನ್ ಮುಗಿದ ಬಳಿಕ ಆತನಿಗಾಗಿ ಒಂದು ನರ್ಸಿಂಗ್ ಹೋಮ್ ಕೂಡಾ ನೋಡಿದ್ದೇನೆ. ಒಂದು ಕಾರು ಬುಕ್ ಮಾಡಿದ್ದೇನೆ." ಗದ್ಗದಿತರಾಗಿ ಅವರು ವಿವರಿಸಿದರು.

ನಿಜ. ಅಲ್ಲಿಯೇ ಸಮಸ್ಯೆ ಹುಟ್ಟಿಕೊಂಡಿದೆ. ಈ ಎಲ್ಲ ನೆರವುಗಳನ್ನು ನೀಡುವಾಗ ಅವರ ಮನದಲ್ಲಿ ಭಾವೀ ಅಳಿಯನ ಕನಸಿತ್ತು. ಈ ಎಲ್ಲ ನೆರವು ಪಡೆದಿರುವ ಹುಡುಗ ನನ್ನ ಮಾತಿಗೆ ವಿರುದ್ಧವಾಗಿ ಮಾತಾಡುವನೆಂದು ಭಾವಿಸಿರಲಿಲ್ಲ. ಈ ನಿರಾಶೆ ಮತ್ತು ದುಃಖಕ್ಕೆ ಅದೇ ಕಾರಣವಾಗಿದೆ. ಈ ಹಿಂದೆ ಉದ್ಧರಿಸಿದ ಕುರ್‌ಆನ್ ವಚನ ಕೂಡಾ ಅದನ್ನೇ ನಮಗೆ ಜ್ಞಾಪಿಸುತ್ತಿದೆ. ಪ್ರತ್ಯುಪಕಾರವನ್ನು ಬಯಸದೆ ಕೇವಲ ಅಲ್ಲಾಹನ ಪ್ರೀತಿಯನ್ನು ಮಾತ್ರ ಬಯಸಿ ಮಾಡುವ ಖರ್ಚಿನಿಂದ ಮಾತ್ರ ಸಂತೃಪ್ತಿ ದೊರೆಯುತ್ತದೆ. ತದ್ವಿರುದ್ಧವಾದರೆ ನಿರಾಶೆ ಮತ್ತು ದುಃಖವೇ ಗತಿ. ನನ್ನ ಮಿತ್ರನ ದುಃಖಕ್ಕೂ ಅದೇ ಕಾರಣವಾಗಿದೆ. ಇಂಥ ಉದ್ದೇಶವಿರಿಸುವ ಎಲ್ಲ ನೆರವುಗಳೂ ನಿಷ್ಫಲ. ಮಾತ್ರವಲ್ಲ ಪರಲೋಕದಲ್ಲಿ ಅವರಿಗೆ ಯಾವ ಪ್ರತಿಫಲವೂ ದೊರೆಯಲಾರದು.

ಆ•ಉ

# ಆತಂಕ ಪಡಬಾರದು

ಆಶೆಯಂತೆಯೇ ಆಶಂಕೆಯೂ ಮಾನಸಿಕ ನೆಮ್ಮದಿಯನ್ನು ಬಹಳಷ್ಟು ಪೀಡಿಸುತ್ತದೆ. ಹಲವೊಮ್ಮೆ ಜೀವನದಲ್ಲಿ ನಮ್ಮಿಂದ ತಪ್ಪುಗಳು ಸಂಭವಿಸುವ ಸಾಧ್ಯತೆಯಿದೆ. ಇಂತಹ ಸಂದರ್ಭಗಳಲ್ಲಿ ತಪ್ಪು ಮತ್ತು ಅಪರಾಧಗಳಿಗೆ ದೊರೆಯಲಿರುವ ಶಿಕ್ಷೆಗಳನ್ನು ಜ್ಞಾಪಿಸಿ ನಾವು ಕಳವಳ ಪಡುತ್ತೇವೆ. ಇಂತಹ ಭೀತಿಯು ನಮ್ಮ ಮನಸ್ಸಿನ ನೆಮ್ಮದಿ ಕೆಡಿಸುತ್ತದೆ. ಆದ್ದರಿಂದ ಅಪರಾಧ ಕೃತ್ಯಗಳಲ್ಲಿ ಸಿಲುಕಿದವರು ಅನಾವಶ್ಯಕ ಕಳವಳಗಳನ್ನು ತೊರೆಯ ಬೇಕು. ತಾನು ಮಾಡಿದ ಅಪರಾಧಕ್ಕೆ ಗರಿಷ್ಠ ದೊರೆಯಬಹುದಾದ ಶಿಕ್ಷೆಯನ್ನು ಸ್ವೀಕರಿಸಲು ಪ್ರತಿಯೊಬ್ಬರೂ ಸಿದ್ಧರಾಗಬೇಕು. ಆ ರೀತಿ ನಾವು ಸಿದ್ಧರಾಗಿದ್ದರೆ ಅನಂತರ ಅದಕ್ಕಾಗಿ ಹೆದರುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ಹಲವೊಮ್ಮೆ ನಮಗೆ ತಿಳಿಯದೆಯೇ ನಾವು ಅಪರಾಧ ಕೃತ್ಯಗಳಲ್ಲಿ ಸಿಲುಕಿ ಬಿಡುತ್ತೇವೆ. ಅದಕ್ಕೆ ಘೋರ ಶಿಕ್ಷೆ ಅನುಭವಿಸಬೇಕಾದೀತು. ಕೆಲವೊಮ್ಮೆ ನಾವು ಯಾವ ಅಪರಾಧವನ್ನೂ ಮಾಡಿರುವುದಿಲ್ಲ. ಆದರೂ ಶಿಕ್ಷೆ ಅನುಭವಿಸಬೇಕಾಗಬಹುದು. ಶಿಕ್ಷೆ ಅನುಭವಿಸಲಿಕ್ಕಾಗಿ ತಿಂಗಳು ಅಥವಾ ವರ್ಷಗಟ್ಟಲೆ ಕಾಯಬೇಕಾದ ಸಂದರ್ಭವೂ ಬರಬಹುದು. ಯಾವ ಯಾವ ಶಿಕ್ಷೆಯನ್ನು ಅನುಭವಿಸಬೇಕಾದೀತೆಂದು ಸದಾ ಚಿಂತಿಸುತ್ತಲಿದ್ದರೆ ಆ ಕಾಲ ಪರ್ಯಂತ ನಾವು ವ್ಯಥೆ ಪಡುತ್ತಿರಬೇಕಾದೀತು. ಬದಲಾಗಿ ಆ ಅಪರಾಧಕ್ಕೆ ದೊರೆಯಬಹುದಾದ ಗರಿಷ್ಠ ಶಿಕ್ಷೆಯನ್ನು ತಿಳಿದು ಅದಕ್ಕೆ ಸನ್ನದ್ಧರಾದರೆ ಆ ಬಳಿಕ ನಾವು ಕಳವಳಗೊಳ್ಳುವ ಪ್ರಮೇಯವಿಲ್ಲ. ಮಾತ್ರವಲ್ಲ ನಾವು ಅನುಭವಿಸ ಬೇಕಾದ ಶಿಕ್ಷೆಯು ನಮ್ಮ ನಿರೀಕ್ಷೆಗಿಂತ ಕಡಿಮೆಯಾದರೆ (ಹೆಚ್ಚಿನ ಸಂದರ್ಭಗಳಲ್ಲಿ ಕಡಿಮೆಯಾಗುವ ಸಾಧ್ಯತೆಯಿದೆ) ತುಂಬಾ ನೆಮ್ಮದಿಯೆನಿಸುವುದು. ಒಂದು ಉದಾಹರಣೆಯಿಂದ ಈ ವಿಷಯ ಸ್ಪಷ್ಟವಾಗುತ್ತದೆ.

ಓರ್ವ ವ್ಯಾಪಾರಿಯ ಲೆಕ್ಕ ಪತ್ರಗಳನ್ನು ಆದಾಯ ಅಥವಾ ಮಾರಾಟ ತೆರಿಗೆ ಅಧಿಕಾರಿಗಳು ವಶಪಡಿಸಿದರೆಂದು ಭಾವಿಸೋಣ. ಅಥವಾ ಯಾವ ತಪ್ಪನ್ನೂ ಮಾಡಿಲ್ಲದ ಓರ್ವ ಶ್ರೀಮಂತನನ್ನು ದರೋಡೆಕೋರರು ಅಥವಾ ಕಳ್ಳರು ಅಪಹರಿಸಿದರೆಂದು ಊಹಿಸೋಣ. ಲೆಕ್ಕದಲ್ಲಿ ಏನಾದರೂ ಮೋಸವಿದ್ದರೆ ವ್ಯಾಪಾರಿಯ ಮನಸ್ಸು ಭಯಗ್ರಸ್ತ ವಾಗುತ್ತದೆ. ಯಾವುದೇ ಮೋಸ ಮಾಡಿಲ್ಲದ ವ್ಯಾಪಾರಿ ಮತ್ತು ನಿರಪರಾಧಿಯಾಗಿರುವ

ಶ್ರೀಮಂತನು, ತಮ್ಮ ವಿಧಿಯನ್ನೂ ದೇವನನ್ನೂ ದೂರುತ್ತಿರುತ್ತಾರೆ. ಯಾವ ತಪ್ಪನ್ನೂ ಮಾಡಿಲ್ಲದ ನಮ್ಮನ್ನು ದಂಡಿಸಿದನೆಂದು ಅವರು ಪ್ರಶ್ನಿಸಬಹುದು. ವಸ್ತುತಃ ಸುಳ್ಳು ಲೆಕ್ಕಗಳನ್ನು ಬರೆದಿಟ್ಟ ವ್ಯಾಪಾರಿಯು, ತಾನು ಮಾಡಿದ ತಪ್ಪಿನಿಂದಾಗಿಯೇ ಹೀಗಾಗಿದೆಯೆಂದು ಸಮಾಧಾನ ಪಡಬೇಕು. ಅದಕ್ಕೆ ಗರಿಷ್ಠ ಶಿಕ್ಷೆಯ ಬಗ್ಗೆ ಆಲೋಚಿಸಬೇಕು. ಒಂದೋ ಲೈಸೆನ್ಸ್ ರದ್ದಾದೀತು, ಅಥವಾ ಭಾರೀ ದಂಡ ತೆರಬೇಕಾದೀತು. ಏನಿದ್ದರೂ ದೊರೆಯ ಬಹುದಾದ ಗರಿಷ್ಠ ಶಿಕ್ಷೆಯನ್ನು ಗ್ರಹಿಸಿ ಅದಕ್ಕೆ ಸಿದ್ಧನಾಗಬೇಕು. ಆ ಬಳಿಕ ಸಾವಧಾನವಾಗಿ ಸಮಸ್ಯೆಗೆ ಪರಿಹಾರ ಕಂಡುಹಿಡಿಯಬೇಕು. ಅನ್ಯಥಾ ಖಿನ್ನತೆಯಿಂದ ವಿಷಯಗಳನ್ನು ವ್ಯವಹರಿಸಿದರೆ ಅಥವಾ ಆಲೋಚಿಸಿದರೆ ಯಾವುದೂ ಸರಿಯಾಗಲಾರದು. ಮಾತ್ರವಲ್ಲ ಅಸಂಬದ್ಧವನ್ನು ಹೇಳುವ ಮತ್ತು ಮಾಡುವ ಸಾಧ್ಯತೆಯಿದೆ. ದರೋಡೆಕೋರರ ಕೈಗೆ ಸಿಕ್ಕಿದ ನಿರಪರಾಧಿ ಶ್ರೀಮಂತನಿಂದ ಅವರು ಅಪಾರ ಹಣ ಕೇಳಬಹುದು. ಅಥವಾ ಆತನ ಪ್ರಾಣವೇ ಅಪಾಯಕ್ಕೆ ಸಿಲುಕಬಹುದು. ಯಾವುದೇ ತಪ್ಪೆಸಗದಿರುವ ತನಗೆ ಇದು ಪರೀಕ್ಷೆಯಾಗಿರ ಬಹುದು, ಇದು ತನ್ನ ವಿಧಿಯೆಂದು ಭಾವಿಸಿ ಸಮಾಧಾನಪಡಬೇಕು. ಮನೋಸ್ಥೈರ್ಯವಿದ್ದರೆ ಅದೇನೂ ಕಷ್ಟದ ಕೆಲಸವಲ್ಲ. ತನಗೆ ಅನುಭವಿಸಬೇಕಾಗುವ ಶಿಕ್ಷೆಯು ನಿರೀಕ್ಷೆಗಿಂತ ಕಡಿಮೆಯಾದರೆ ಸಂತೋಷ ಮತ್ತು ಸಂತೃಪ್ತಿಯುಂಟಾಗುತ್ತದೆ.

ನನ್ನ ಒಂದು ಅನುಭವವನ್ನು ವಿವರಿಸಿದರೆ ಅಸಾಂದರ್ಭಿಕವೆನಿಸಲಾರದು. ನಾನು ಸಹಕಾರಿ ಲೆಕ್ಕಪರಿಶೋಧಕನಾಗಿದ್ದ ಕಾಲ. ಪಾಲಕ್ಕಾಡ್ ಜಿಲ್ಲೆಯ ಒಂದು ಮೆಟಲ್ ವರ್ಕ್ಸ್- ಕೋ - ಆಪರೇಟಿವ್ ಸೊಸೈಟಿಯಲ್ಲಿ ನಾನು ಲೆಕ್ಕಪರಿಶೋಧನೆಗೆ ಹೋಗ ಬೇಕಾಯಿತು. ಸೊಸೈಟಿಯ ಕಾರ್ಯದರ್ಶಿಯು ಯೋಗ್ಯರಾಗಿದ್ದರು. ಬಹಳ ಒಳ್ಳೆಯ ಮನುಷ್ಯ. ಪರೋಪಕಾರಕ್ಕೆ ಸದಾ ಸಿದ್ಧ. ಎಲ್ಲರೂ ಅವರನ್ನು ಬಹಳಷ್ಟು ಪ್ರೀತಿಸುತ್ತಿದ್ದರು. ಬ್ರಿಟಿಷರ ಕಾಲದಲ್ಲಿಯೂ ಭಾರತ ಸ್ವತಂತ್ರವಾದ ಬಳಿಕವೂ ಆಡಳಿತ ನಿರ್ವಹಣಾ ರಂಗದಲ್ಲಿ ಶ್ಲಾಘನೀಯ ಸೇವೆ ಸಲ್ಲಿಸಿದ ಓರ್ವ ಮಹಾವ್ಯಕ್ತಿಯ ಸಹೋದರನೆಂಬ ವಿಶೇಷ ಗೌರವಕ್ಕೂ ಅವರು ಪಾತ್ರರಾಗಿದ್ದರು. ಅವರ ಬಗ್ಗೆ ಯಾವ ಅಧಿಕಾರಿಗೂ ಪ್ರಶ್ನಿಸುವ ಅಥವಾ ಸಂದೇಹಪಡುವ ಪ್ರಮೇಯವೇ ಇರಲಿಲ್ಲ. ಯಾರಿಗೂ ಅಂತಹ ಧೈರ್ಯವಿರಲಿಲ್ಲ.

ಖಾತೆಯಲ್ಲಿ ಜಮೆಯಾಗಿರುವ ಹಣದ ಪರಿಶೀಲನೆಯು ಲೆಕ್ಕಪರಿಶೋಧಕರ ಪ್ರಥಮ ಕೆಲಸವಾಗಿದೆ. ನಾನು ಪರಿಶೀಲನೆಗೆ ಹೋದ ದಿನ ಲೆಕ್ಕ ಪುಸ್ತಕದ ಪ್ರಕಾರ ರೂ. 37,000 ಕೈಯಲ್ಲಿರಬೇಕಾಗಿತ್ತು. ನಗದಿಯ ಬಗ್ಗೆ ವಿಚಾರಿಸಿದಾಗ ರೂ. 17,000 ತೋರಿಸಿದರು. ಉಳಿದ ರೂ. 20,000ಗಳನ್ನು ಸರಕು ಖರೀದಿಗಾಗಿ ಕೊಯಂಬತ್ತೂರಿಗೆ ಓರ್ವರ ಕೈಯಲ್ಲಿ ಕೊಟ್ಟು ಕಳುಹಿಸಿರುವುದಾಗಿ ತಿಳಿಸಿದರು. ಹಣವನ್ನು ನಗದಿಯಾಗಿ ಕೊಟ್ಟರೆ ಮಾತ್ರ ಸಾಮಾನು ದೊರೆಯುವುದರಿಂದ ಆ ರೀತಿ ಮಾಡಿರುವುದಾಗಿಯೂ ತಿಳಿಸಿದರು. ನನಗೆ ಅದು ಸರಿಗಾಣಿಸಲಿಲ್ಲ. ಹಣ ಸಂಪೂರ್ಣ ನೋಡಲೇ ಬೇಕೆಂದು ನಾನು ಸೂಚಿಸಿದೆ. 'ಹಾಗಾದರೆ ನನಗೆ ಅರ್ಧ ತಾಸು ಅವಕಾಶ ಕೊಡಿ. ನಾನು ಪಾಲ್ಘಾಟಿಗೆ ಹೋಗಿ ತರುತ್ತೇನೆ' ಎಂದು

ಅವರು ಹೇಳಿದರು. ಅವರ ಮಾತಿನ ಆಧಾರದಲ್ಲಿ ಕೈವಶವಿದ್ದ ಹಣವನ್ನು ಸಂಪೂರ್ಣ ಪರಿಶೀಲಿಸಿರುವುದಾಗಿ ನಾನು ನಮೂದಿಸಿದೆ.

ಮೂರು ತಿಂಗಳ ಬಳಿಕ ಉಪರಿಜಿಸ್ಟ್ರಾರ್‌ರೂ ಅಲ್ಲಿ ಪರಿಶೀಲನೆಗೆ ಹೋದರು. ಅಂದು ಕೂಡಾ ನಗದಿ ಹಣದಲ್ಲಿ ಭಾರಿ ಮೊತ್ತ ಕಡಿಮೆಯಿತ್ತು. ನನಗೆ ನೀಡಿದ್ದ ಉತ್ತರವನ್ನೇ ಉಪರಿಜಿಸ್ಟ್ರಾರ್‌ರಿಗೆ ನೀಡಿದರೂ ಅವರು ಅದನ್ನು ಅಂಗೀಕರಿಸಲಿಲ್ಲ. ಬಾಕಿಯಿರುವ ಹಣವನ್ನು ಮುಂಗಡ ನೀಡಿರುವುದಾಗಿ ಡೇ ಬುಕ್‌ನಲ್ಲಿ ಬರೆಯುವಂತೆ ಆದೇಶಿಸಿ ಉಳಿದ ಹಣವನ್ನು ಪರಿಶೀಲಿಸಿರುವುದಾಗಿ ಅವರು ಬರೆದರು. ಈ ಹಣವನ್ನು ಒಂದು ವಾರದೊಳಗೆ ಮರಳಿ ಪಡೆದು ವಿವರ ತಿಳಿಸಬೇಕೆಂದೂ ಅವರು ಆಜ್ಞಾಪಿಸಿದರು. ಅದಕ್ಕೆ ತಪ್ಪಿದರೆ ಕಠಿಣ ಕ್ರಮ ಕೈಗೊಳ್ಳುವುದಾಗಿ ಅವರು ಎಚ್ಚರಿಕೆ ನೀಡಿದರು.

ಎರಡು ವಾರ ಕಳೆದರೂ ಕಾರ್ಯದರ್ಶಿಯಿಂದ ಉತ್ತರ ಬಾರದಿದ್ದಾಗ ಅವರು ಪುನಃ ಪತ್ರ ಬರೆದರು. ಪತ್ರಗಳ ಹಿಂದೆ ನಾಲ್ಕೈದು ಜ್ಞಾಪಕ ಪತ್ರಗಳನ್ನೂ ಕಳುಹಿಸಿದರು. ಆದರೆ, ಫಲ ನಾಸ್ತಿ. ಕೊನೆಗೆ ಕಟುಕ್ರಮ ಕೈಗೊಳ್ಳುವುದಾಗಿ ಅವರು ನೋಟೀಸು ಕಳುಹಿಸಿದರು.

ನಾಲ್ಕೈದು ದಿನಗಳ ಬಳಿಕ ಕಾರಣಾಂತರಗಳಿಂದ ನನಗೆ ರಿಜಿಸ್ಟ್ರಾರ್‌ರ ಕಚೇರಿಗೆ ಹೋಗಬೇಕಾಯಿತು. ಅಲ್ಲಿ ಸ್ಮಶಾನ ಮೌನ! ಓರ್ವ ಗುಮಾಸ್ತನೊಡನೆ ವಿಚಾರಿಸಿದಾಗ ವಿಷಯ ತಿಳಿಯಿತು.

ಈ ಹಿಂದೆ ಹೇಳಿದ ಮೆಟಲ್ ವರ್ಕ್ಸ್ ಸೊಸೈಟಿಯ ಕಾರ್ಯದರ್ಶಿಯು ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ! ನಾನು ದಿಗ್ಭ್ರಾಂತನಾದೆ.

ಲೆಕ್ಕಪುಸ್ತಕದ ಪ್ರಕಾರ ರೂ. 42,000 ಕ್ಕೂ ಅಧಿಕ ಹಣ ಉಳಿತಾಯವಿದ್ದರೂ ತಿಜೋರಿ ತೆರೆದಾಗ ಅದರಲ್ಲಿ ಐವತ್ತು ಪೈಸೆ ಮಾತ್ರ ಇತ್ತು. ಉಪರಿಜಿಸ್ಟ್ರಾರ್‌ರು ಈಗ ತಾನೇ ಪರಿಶೀಲನೆ ನಡೆಸಿ ಮರಳಿದ್ದಾರೆ. ಗುಮಾಸ್ತ ಹೇಳಿದ.

ಸ್ವಲ್ಪ ಹೊತ್ತಿನ ಬಳಿಕ ಮತ್ತೊರ್ವ ಇನ್ಸ್‌ಪೆಕ್ಟರ್‌ರಿಂದ ಹೆಚ್ಚಿನ ಮಾಹಿತಿ ದೊರೆಯಿತು. 'ಪರಿಶೀಲನೆಗಾಗಿ ರಿಜಿಸ್ಟ್ರಾರ್‌ರ ಜತೆಯಲ್ಲಿ ಹೋದ ಹೆಡ್‌ಕ್ಲರ್ಕ್ ಸ್ಮೃತಿ ತಪ್ಪಿ ಬಿದ್ದಿದ್ದಾರೆ. ಅವರನ್ನು ಮನೆಗೆ ಸಾಗಿಸಲಾಗಿದೆ. ಮೂವರು ಲೆಕ್ಕಪರಿಶೋಧಕರ ಪೈಕಿ ಓರ್ವರು ಜೋರಾಗಿ ಅಳುತ್ತಾ ಅವರು ತಂಗಿರುವ ಲಾಡ್ಜ್‌ನಲ್ಲಿ ಹೋಗಿ ಬೋರಲು ಮಲಗಿದ್ದಾರೆ. ಉಳಿದೀರ್ವರು ಲೆಕ್ಕಪರಿಶೋಧಕರು ಅಲ್ಲಿ ಉಪಸ್ಥಿತರಿಲ್ಲದಿರುವುದರಿಂದ ಅವರಿಗೆ ಏನಾಗಿದೆಯೆಂದು ತಿಳಿದಿಲ್ಲ.'-

ಈ ಬೆಚ್ಚಿಬೀಳಿಸುವ ವಿವರಗಳನ್ನು ಕೇಳಿದ ಬಳಿಕ ನಾನು ಮೆಲ್ಲನೆ ಹೇಳಿದೆ: 'ಕೊನೆಗೆ ಲೆಕ್ಕಪರಿಶೀಲನೆ ನಡೆಸಿದ್ದು ನಾನಲ್ಲವೇ?'

'ಹಾಗಾದರೆ ನೀವೂ ಸಿಕ್ಕಿಬೀಳುತ್ತೀರಿ. ಕೂಡಲೇ ವಿವರವಾದ ತನಿಖೆ ನಡೆಯಬಹುದು. ಅಲ್ಲಿ ಏನೋ ಮೋಸ ನಡೆದಿದೆ. ಎಲ್ಲರೂ ಸಿಕ್ಕಿಬೀಳುವ ಸಾಧ್ಯತೆಯಿದೆ.' - ಇನ್ಸ್‌ಪೆಕ್ಟರ್ ಒತ್ತಿ ಹೇಳಿದರು.

'ಸರಿ, ನಾನು ಯಾವ ತಪ್ಪನ್ನೂ ಮಾಡಿಲ್ಲ. ಮಾಡದ ತಪ್ಪಿಗಾಗಿ ಶಿಕ್ಷೆ ಅನುಭವಿಸಬೇಕಾದರೆ ಅದಕ್ಕೂ ಸಿದ್ಧ.' ನನಗೆ ಆ ರೀತಿ ಉತ್ತರಿಸಬೇಕೆಂದು ತೋಚಿತು.

ನನ್ನ ಉತ್ತರವು ಇನ್ಸ್‌ಪೆಕ್ಟರ್‌ರಿಗೆ ಹಿಡಿಸಿತೋ ತಿಳಿಯದು. ನಮ್ಮ ಸಂಭಾಷಣೆ ಅಲ್ಲಿಗೆ ಮುಕ್ತಾಯವಾಯಿತು. ನಾನು ಕೂಡಲೇ ಹಾಲು ವಿತರಣಾ ಸಂಘದ ನನ್ನ ಕೆಲಸದಲ್ಲಿ ತೊಡಗಿದೆ.

ಮರುದಿನ ಬೆಳಗಾತ, ಹಿಂದಿನ ದಿನ ಗೋಗರೆದು ಅಳುತ್ತಿದ್ದ ಲೆಕ್ಕಪರಿಶೋಧಕ ನನ್ನನ್ನು ಭೇಟಿಯಾಗಲಿಕ್ಕಾಗಿ ಹಾಲುವಿತರಣಾ ಕೇಂದ್ರಕ್ಕೆ ಬಂದರು. ಆಸಾಮಿಯು ಸಂಪೂರ್ಣ ಹತಾಶರಾಗಿದ್ದರು. ನಾನು ಎಂದಿನಂತೆಯೇ ನಿರಾಳವಾಗಿ ಕೆಲಸ ಮಾಡುತ್ತಿರುವುದನ್ನು ನೋಡಿದಾಗ ನನಗೆ ಯಾವ ವಿಷಯವೂ ತಿಳಿದಿಲ್ಲವೆಂದು ಅವರು ಭಾವಿಸಿದರು. ಅವರು ನನ್ನ ಮುಂದೆ ಕುಳಿತು ಸಂಭಾಷಣೆ ಆರಂಭಿಸಿದರು.

"ಸಮಾಚಾರ ತಿಳಿದಿಲ್ಲವೇ?"

"ಎಲ್ಲವೂ ತಿಳಿದಿದೆ."

"ನಾವು ಇನ್ನೇನು ಮಾಡುವುದು?"

"ಮಾಡುವುದೇನು? ನೀವೇನಾದರೂ ತಪ್ಪು ಮಾಡಿದ್ದೀರಾ? ನಾನು ಯಾವ ತಪ್ಪನ್ನೂ ಮಾಡಿಲ್ಲ."

"ಆದ್ದರಿಂದಲೇ ನನಗೆ ಚಿಂತೆ. ಮಾಡದ ತಪ್ಪಿಗಾಗಿ ಶಿಕ್ಷೆ ಅನುಭವಿಸುವ ಪರಿಸ್ಥಿತಿ ಬಂದರೆ..."

"ಹಲವೊಮ್ಮೆ ಹಾಗೂ ಸಂಭವಿಸಬಹುದು. ಮಾಡಿದ ಅನೇಕ ತಪ್ಪುಗಳಿಗೆ ಶಿಕ್ಷೆ ದೊರೆಯದೆ ಪಾರಾಗಿರಬಹುದು." ನಾನು ಹೇಳಿದೆ:

"ಇದೇನು ನೀವು ಹೀಗೆ ಮಾತಾಡುತ್ತಿರುವಿರಿ?"

'ನಾನೊಂದು ಪ್ರಶ್ನೆ ಕೇಳುತ್ತೇನೆ- ಇದಕ್ಕೆ ಶಿಕ್ಷೆ ಅನುಭವಿಸಬೇಕಾದೀತೆಂದೇ ಭಾವಿಸೋಣ. ಅದರ ಗರಿಷ್ಠ ಶಿಕ್ಷೆ ಏನಿರಬಹುದು?"

"ಒಂದು ವೇಳೆ ಕೆಲಸವೇ ಹೋಗಬಹುದು."

"ಅಷ್ಟೇ ತಾನೆ. ಮರಣದಂಡನೆಯಾಗಲಾರದಲ್ಲವೇ. ಹಾಗಾದರೆ ಆ ಶಿಕ್ಷೆಗೆ ಸಿದ್ಧರಾಗೋಣ"

"ನೀವು ಆ ರೀತಿ ಸುಲಭವಾಗಿ ಹೇಳಿ ಬಿಡಬಹುದು. ನೀವು ಶ್ರೀಮಂತರಾಗಿದ್ದೀರಿ. ಈ ಕೆಲಸ ಹೋದರೂ ನಿಮಗೆ ಬೇರೆ ಏನೆಲ್ಲ ಇರಬಹುದು." ನನಗೆ ಆ ಮಾತು ಕೇಳಿ ನಗು ಬಂತು.

"ನಾನೇನೂ ಶ್ರೀಮಂತನಲ್ಲ. ಶ್ರೀಮಂತನಾಗಿರುತ್ತಿದ್ದರೆ ಮೊದಲೇ ಈ ಕೆಲಸಕ್ಕೆ ನಾನು ಸೇರುತ್ತಿರಲಿಲ್ಲ. ಏನಾದರೂ ವ್ಯಾಪಾರ ವಹಿವಾಟು ಮಾಡುತ್ತಿದ್ದೆ. ಅದೆಲ್ಲ ಹೋಗಲಿ ಬಿಡಿ.

ನೀವು ವ್ಯಥೆ ಪಡದೆ ಕೆಲಸ ಮಾಡಿ" ನಾನು ಹೇಳಿ ಮುಗಿಸಿದೆ. ನನ್ನ ಉಪದೇಶವು ಅವರಿಗೆ ಸ್ವಲ್ಪವೂ ರುಚಿಸಲಿಲ್ಲ. ಅವರು ಏನೂ ಹೇಳದೆ ಹೊರಟುಹೋದರು. ಪ್ರಕರಣದ ಸಮಗ್ರ ತನಿಖೆ ನಡೆಯುವಾಗ ಐದು ವರ್ಷ ಕಳೆದಿತ್ತು. ಈ ಕಾಲಾವಧಿಯಲ್ಲಿ ಲೆಕ್ಕ ಪರಿಶೋಧಕ ಮತ್ತು ಹೆಡ್ ಕ್ಲಾರ್ಕ್ ನನಗೆ ತಿಳಿದಿರುವ ಮಟ್ಟಿಗೆ ಯಾವಾಗಲೂ ಅದೇ ಚಿಂತೆಯಲ್ಲಿ ಮುಳುಗಿದ್ದರು.

ಕೊನೆಗೆ ಇನ್ಸ್‌ಪೆಕ್ಟರ್‌ರಿಗೆ ಮೂರು ತಿಂಗಳ ಇಂಕ್ರಿಮೆಂಟ್ ಕಡಿತವಾಯಿತು. ಮಿತಿಗಿಂತ ಹೆಚ್ಚು ಹಣವನ್ನು ಕೈವಶವಿರಿಸಿರುವ ವಿಶೇಷ ವರದಿ ಸಲ್ಲಿಸಲಿಲ್ಲವೆಂಬ ಕಾರಣಕ್ಕಾಗಿ ನನಗೂ ಕಪ್ಪುಚುಕ್ಕೆ ದೊರೆಯಿತು. ಹೆಡ್ ಕ್ಲರ್ಕ್‌ಗೆ ಯಾವ ಶಿಕ್ಷೆಯೂ ಆಗಲಿಲ್ಲ.

ಆ ಘಟನೆಯ ಬಳಿಕ ಇಬ್ಬರನ್ನೂ ಭೇಟಿಯಾದಾಗ ನಾನು ಕೇಳಿದೆ: 'ನನ್ನ ಮಾತು ಈಗ ನಿಮಗೆ ಅರ್ಥವಾಯಿತಾ? ಈ ತನಕ ವ್ಯಥೆ ಪಟ್ಟು ಓಡಾಡಿ ಯಾವ ಪ್ರಯೋಜನವಾಯಿತು? ಶಿಕ್ಷೆಯನ್ನು ನಾನೂ ನೀವೂ ಅನುಭವಿಸಬೇಕಾಯಿತು.' ಅವರು ಏನೂ ಉತ್ತರಿಸಲಿಲ್ಲ ವ್ಯಥೆ ಪಟ್ಟಿದ್ದೇ ಅವರಿಗೆ ಲಾಭ.

❧ • ❧

# ಪರಲೋಕ ಶಾಶ್ವತ

ಇಹಲೋಕ ಜೀವನವು ಅತ್ಯಂತ ಕ್ಷಣಿಕ. ಮರಣವು ಯಾವಾಗ ಬರುವುದೆಂದು ನಮಗೆ ತಿಳಿದಿಲ್ಲ. ಅದನ್ನು ಅರಿತುಕೊಂಡರೆ ಐಹಿಕ ಜೀವನಕ್ಕೆ ನಾವು ಅಮಿತ ಪ್ರಾಧಾನ್ಯ ನೀಡುತ್ತಿರಲಿಲ್ಲ. ಆ ಕುರಿತು ಕುರ್‌ಆನ್ ನಮಗೆ ಹೀಗೆ ನೆನಪಿಸುತ್ತದೆ:

**"ಹೇಳಿರಿ, ಐಹಿಕ ಜೀವನದ ಬಂಡವಾಳವು ಅತ್ಯಲ್ಪವಾಗಿದೆ ಮತ್ತು ದೇವಭಯವುಳ್ಳವನಿಗೆ ಪರಲೋಕವು ಹೆಚ್ಚು ಉತ್ತಮವಾಗಿದೆ ಮತ್ತು ನಿಮ್ಮ ಮೇಲೆ ಕಿಂಚಿತ್ತೂ ಅಕ್ರಮ ನಡೆಯದು."** **(ಪವಿತ್ರ ಕುರ್‌ಆನ್, 4:77)**

ಕುರೈಶರೊಡನೆ ನಮಾಝನ್ನು ಕ್ರಮಪ್ರಕಾರ ನಿರ್ವಹಿಸಿ ಝಕಾತ್ ನೀಡಿ ಇಸ್ಲಾಮಿನ ರಕ್ಷಣೆಗಾಗಿ ಹೋರಾಡುವಂತೆ ಅಲ್ಲಾಹನು ಆಜ್ಞಾಪಿಸಿರುವ ವಿಷಯವನ್ನು ಜ್ಞಾಪಿಸಿರಿ. ಆಗ ಕೆಲವರು ಹೆದರಿದರು. ಅವರು ಕೇಳಿದರು:

'ಓ ನಮ್ಮ ಪ್ರಭುವೇ, ನೀನು ನಮ್ಮೊಡನೆ ಯುದ್ಧಕ್ಕೆ ಆಜ್ಞಾಪಿಸುವುದೇಕೆ? ನಮಗೆ ಇನ್ನೂ ಸ್ವಲ್ಪ ಕಾಲ ಜೀವಿಸುವ ಅವಕಾಶ ನೀಡುವುದಿಲ್ಲವೇಕೆ?' ಆ ಸಂದರ್ಭದಲ್ಲಿ ಕುರ್‌ಆನ್ ಮೇಲಿನಂತೆ ಉಪದೇಶಿಸಿತು. ಈ ಲೋಕದಲ್ಲಿ ಅವರು ಎಷ್ಟು ಕಾಲ ಬಾಳಿದರೂ ಪರಲೋಕ ಜೀವನಕ್ಕೆ ಹೋಲಿಸಿದರೆ ಆ ಜೀವನವು ಬಹಳ ತುಚ್ಛವಾಗಿದೆ. ಹೀಗಿರುತ್ತಾ ಈ ಲೋಕದ ಜೀವನದಲ್ಲಿ ಸತ್ಕರ್ಮಗಳನ್ನು ಮಾಡಲು, ಅಗತ್ಯವಾದರೆ ಯುದ್ಧಮಾಡಲು ಯಾಕೆ ಸಿದ್ಧರಾಗುವುದಿಲ್ಲ? ಯುದ್ಧ ಮಾಡಿ ಮರಣದ ಅಂಚಿಗೆ ತಲುಪಿದಾಗಲೂ ತನ್ನ ಆದರ್ಶವನ್ನು ಬಲಿ ನೀಡದೆ ವಿಶ್ವಾಸವನ್ನು ಬದಲಾಯಿಸದೆ ಮರಣವನ್ನು ಅಪ್ಪಿಕೊಂಡ ಹ. ಬಿಲಾಲ್‌ರ(ರ) ಚರಿತ್ರೆಯು ನಮಗೆ ತಿಳಿದಿದೆ. ಇಹಲೋಕ ಜೀವನಕ್ಕೆ ಅವರು ಮಹತ್ವ ನೀಡಲಿಲ್ಲ. ಇಲ್ಲಿನ ಹಿಂಸೆ ಯಾತನೆಗಳು ಅವರಿಗೆ ನೆಮ್ಮದಿದಾಯಕವಾಗಿತ್ತು. ಅವುಗಳನ್ನು ಪರಲೋಕಕ್ಕಾಗಿ ಸಹಿಸಿದರು. ಹೀಗೆ ಸಂತೃಪ್ತಿಯಿಂದ ಮರಣ ಹೊಂದಿದರು.

ಈ ತತ್ವವನ್ನು ಕುರ್‌ಆನ್ ಇನ್ನೊಂದು ವಚನದ ಮೂಲಕವೂ ನಮಗೆ ಜ್ಞಾಪಿಸಿಕೊಟ್ಟಿದೆ:

**"ಓ ಜನಾಂಗವೇ! ಈ ಲೌಕಿಕ ಜೀವನವು ಕೆಲವೇ ದಿನಗಳ ಸಾಧನವಾಗಿದೆ. ಶಾಶ್ವತ ನಿವಾಸವು ಪರಲೋಕವೇ ಆಗಿದೆ."** **(ಪವಿತ್ರ ಕುರ್‌ಆನ್, 40:39)**

ಇದು ಪ್ರವಾದಿ ಮೂಸಾರು(ಅ) ಫಿರ್‌ಔನ್‌ನ ಜನತೆಗೆ ನೀಡಿದ ಉಪದೇಶವಾಗಿದೆ. ಫಿರ್‌ಔನ್ ಮೆರೆದಾಡುತ್ತಿದ್ದ ಕಾಲ. ತನ್ನ ದುಷ್ಕೃತ್ಯಗಳಿಗಾಗಿಯೂ ಫಿರ್‌ಔನ್ ಹೆಮ್ಮೆ ಪಡುತ್ತಿದ್ದನು. ಫಿರ್‌ಔನ್ ಮತ್ತು ಸಂಗಡಿಗರು ಪ್ರವಾದಿ ಮೂಸಾರ(ಅ) ಉಪದೇಶಗಳಿಗೆ ಕಿವಿಗೊಡಲಿಲ್ಲ. ಫಿರ್‌ಔನ್ ಹೇಳಿದ: 'ಮೂಸಾರ(ಅ) ಮಾತು ನಿಜವೆಂದಾದರೆ ನನಗೊಂದು ದೊಡ್ಡ ಕಟ್ಟಡವನ್ನು ನಿರ್ಮಿಸಿಕೊಡುವಂತೆ ಹೇಳಿರಿ. ಆ ಕಟ್ಟಡದ ಮೇಲೇರಿ ನಾನು ಮೂಸಾರ(ಅ) ದೇವನನ್ನೊಮ್ಮೆ ನೋಡಿ ಬಿಡುತ್ತೇನೆ.' ಪ್ರವಾದಿ ಮೂಸಾರನ್ನು(ಅ) ಆತ ಗೇಲಿ ಮಾಡಿದ. ಆದರೆ ಐಹಿಕ ಜೀವನವು ಕ್ಷಣಿಕವೆಂದು ಫಿರ್‌ಔನ್ ಮತ್ತು ಸಂಗಡಿಗರಿಗೆ ಹೆಚ್ಚು ತಡವಿಲ್ಲದೆ ಮನವರಿಕೆಯಾಯಿತು. ಲೌಕಿಕ ಜೀವನಕ್ಕೆ ಪ್ರಾಧಾನ್ಯ ನೀಡುವ ಮೌಢ್ಯದ ಬಗ್ಗೆ ಇತರ ವಚನಗಳಲ್ಲಿಯೂ ಕುರ್‌ಆನ್ ಬೊಟ್ಟು ಮಾಡಿದೆ.

**"ಆದರೆ ನೀವು ಇಹಲೋಕ ಜೀವನಕ್ಕೆ ಆದ್ಯತೆ ಕೊಡುತ್ತೀರಿ. ವಸ್ತುತಃ ಪರಲೋಕವು ಹೆಚ್ಚು ಉತ್ತಮವೂ ಶಾಶ್ವತವೂ ಆಗಿದೆ."**

**(ಪವಿತ್ರ ಕುರ್‌ಆನ್, 87:16-17)**

**"ಕಟ್ಟಕಡೆಗೆ ಪ್ರತಿಯೊಬ್ಬನಿಗೂ ಮರಣ ಹೊಂದಬೇಕಾಗಿದೆ ಮತ್ತು ನೀವೆಲ್ಲರೂ ನಿಮ್ಮ ನಿಮ್ಮ ಪ್ರತಿಫಲವನ್ನು ಪುನರುತ್ಥಾನ ದಿನದಂದು ಪಡೆಯುವವರಿದ್ದೀರಿ. ಅಲ್ಲಿ ನರಕಾಗ್ನಿಯಿಂದ ರಕ್ಷೆ ಹೊಂದುವವನೂ ಸ್ವರ್ಗದಲ್ಲಿ ದಾಖಲು ಮಾಡಲ್ಪಡುವವನೂ ನಿಜವಾದ ಕೃತಾರ್ಥನು. ಈ ಲೋಕದ ಜೀವನವಂತೂ ಕೇವಲ ಭ್ರಾಮಕ ಸಂಪತ್ತಾಗಿದೆ."**

**(ಪವಿತ್ರ ಕುರ್‌ಆನ್, 3:185)**

ಎಲ್ಲರೂ ಮರಣ ಹೊಂದುವರು. ಈ ದಿನವೇ ಮರಣ ಸಂಭವಿಸಬಹುದೆಂದು ಭಾವಿಸಿ ಸತ್ಕರ್ಮಗಳನ್ನು ಮಾಡಿ ದುಷ್ಕರ್ಮಗಳನ್ನು ತಡೆಯಲು ಸಿದ್ಧರಾಗಬೇಕು. ನಾವು ಈ ಲೋಕದಲ್ಲಿ ಮಾಡುವ ಕರ್ಮಗಳ ಪ್ರತಿಫಲವು ನಮಗೆ ಪರಲೋಕದಲ್ಲಿ ದೊರೆಯುತ್ತದೆ. ಇಲ್ಲಿ ನಮಗೆ ದೊರೆಯುವುದು ಕೇವಲ ಮನಃಶಾಂತಿ ಮಾತ್ರ. ಐಹಿಕ ಜೀವನವು ತಾತ್ಕಾಲಿಕವಾದ ಭ್ರಾಮಕ ಅನುಭವವೆಂದೂ ಈ ವಚನದಲ್ಲಿ ಅಲ್ಲಾಹನು ನಮ್ಮನ್ನು ಎಚ್ಚರಿಸಿದ್ದಾನೆ. ಇಲ್ಲಿನ ಸುಖ ಸೌಲಭ್ಯಗಳನ್ನು ಸವಿಯುತ್ತಿರುವಾಗ ಪರಲೋಕವನ್ನು ನಾವು ಮರೆಯಬಾರದು. ನಮಗೆ ಇಲ್ಲಿ ದೊರೆಯುವ ಸುಖ ಸಂಕಷ್ಟಗಳು ಕೇವಲ ತಾತ್ಕಾಲಿಕವಾಗಿವೆ.

ಕುರ್‌ಆನಿನ ಈ ವಚನವನ್ನೂ ಈ ಸಂದರ್ಭದಲ್ಲಿ ಜ್ಞಾಪಿಸುವುದು ಉತ್ತಮ.

**"ಇನ್ನು ಮರಣವಂತು ನೀವು ಎಂತಹ ಭದ್ರ ಕೋಟೆಯೊಳಗಿದ್ದರೂ ನಿಮಗೆ ಬಂದೇ ತೀರುವುದು."** **(ಪವಿತ್ರ ಕುರ್‌ಆನ್, 4:78)**

ಮರಣದಿಂದ ಪಾರಾಗಲು ಯಾರಿಗೂ ಸಾಧ್ಯವಿಲ್ಲ. ಓರ್ವ ತಜ್ಞ ವೈದ್ಯ, ಆಗರ್ಭ ಶ್ರೀಮಂತ ಅಥವಾ ಆಡಳಿತಗಾರನಾಗಿದ್ದರೂ ಸರಿಯೆ.

ಓರ್ವ ಪ್ರಖ್ಯಾತ ವೈದ್ಯ. ಆತನ ಅಧೀನದಲ್ಲಿ ಕೆಲಸ ಮಾಡುವ ಇತರ ಅನೇಕ ವೈದ್ಯರ ಸಮ್ಮುಖದಲ್ಲಿ, ಎಲ್ಲಾ ರೀತಿಯ ಔಷಧ ಮತ್ತು ಅತ್ಯಾಧುನಿಕ ಸೌಲಭ್ಯವಿರುವ

ತನ್ನ ಸ್ವಂತ ನರ್ಸಿಂಗ್ ಹೋಮ್‌ನಲ್ಲಿ ಹೃದಯಾಘಾತದಿಂದ ನಿಧನರಾದರು. ಅವರ ವೈದ್ಯಕೀಯ ಶಿಕ್ಷಣ ಅಥವಾ ಸೌಲಭ್ಯಗಳಿಗೆ ಅವರನ್ನು ಉಳಿಸಲು ಸಾಧ್ಯವಾಗಲಿಲ್ಲ.

ಈ ವೈದ್ಯರು ತಮ್ಮ ಜೀವನ ಕಾಲದಲ್ಲಿ ಹೇಳಿದ್ದ ಒಂದು ಘಟನೆಯೂ ನನಗೆ ನೆನಪಾಗುತ್ತಿದೆ: ಓರ್ವರು ಇಂಗ್ಲೆಂಡಿನ ಪ್ರಸಿದ್ಧ ಹೃದಯರೋಗ ತಜ್ಞರ ಬಳಿಯಲ್ಲಿ ಹತ್ತು ವರ್ಷ ಚಿಕಿತ್ಸೆ ಪಡೆದರು. ಕೊನೆಗೆ ವೈದ್ಯರು ಅವರೊಡನೆ ಹೀಗೆ ಹೇಳಿದರು: 'ನಿಮಗೆ ಯಾವ ತೊಂದರೆಯೂ ಇಲ್ಲ. ಆದರೆ, ಕೋಣೆ ಬಿಟ್ಟು ಹೊರಗೆ ಎರಡು ಹೆಜ್ಜೆಯಿರಿಸಿದ ಕೂಡಲೇ ಹೃದಯಾಘಾತದಿಂದ ಆತ ಕುಸಿದುಬಿದ್ದ. ಇದು ನಡೆದ ಕಥೆ.

ಭಾರತದ ಮತ್ತೋರ್ವ ಹೃದಯರೋಗ ತಜ್ಞರು, ಹೃದ್ರೋಗಗಳ ಕುರಿತು ಇತರ ವೈದ್ಯರಿಗೆ ಸೆಮಿನಾರ್‌ನಲ್ಲಿ ಉಪನ್ಯಾಸ ನೀಡುತ್ತಿದ್ದಾಗ ಹೃದಯ ಸ್ತಂಭನದಿಂದ ಕುಸಿದು ಮರಣ ಹೊಂದಿದ್ದರು. ಕೋಝಿಕ್ಕೋಡ್‌ನ ಓರ್ವ ವೈದ್ಯ ಮಿತ್ರರು ಎದೆ ನೋವಿನಿಂದ ಬಳಲುತ್ತಿದ್ದ ತನ್ನ ತಾಯಿಯ ತಜ್ಞ ವೈದ್ಯಕೀಯ ಪರೀಕ್ಷೆಗಾಗಿ ಚೆನ್ನೈಗೆ ಕರೆದುಕೊಂಡು ಹೋದರು. ಪರೀಕ್ಷಿಸಿದ ಬಳಿಕ ಏನೂ ತೊಂದರೆಯಿಲ್ಲವೆಂದು ಹೇಳಿ ಆಸ್ಪತ್ರೆಯ ವೈದ್ಯರು ಮರಳಿ ಕಳುಹಿಸಿದರು. ವೈದ್ಯರು ಮತ್ತು ತಾಯಿಯು ಕಾರಿನಲ್ಲಿ ಕುಳಿತುಕೊಳ್ಳುತ್ತಿರುವಾಗ ಕುಸಿದು ಬಿದ್ದು ಮರಣಹೊಂದಿದ್ದು ಬೇರೆ ಯಾರೂ ಅಲ್ಲ, ತಾಯಿಯನ್ನು ಪರೀಕ್ಷಿಸಿದ್ದ ವೈದ್ಯರೇ!!

ಹಾಗಾದರೆ ಮರಣವನ್ನು ಯಾರಿಂದಲೂ ಯಾವುದರಿಂದಲೂ ತಡೆಯಲು ಸಾಧ್ಯವಿಲ್ಲ. ಅದು ಯಾವಾಗ ಬರುವುದೆಂದು ಹೇಳಲೂ ಸಾಧ್ಯವಿಲ್ಲ. ಧರ್ಮ ಪ್ರಚಾರ ಕಾರ್ಯದಲ್ಲಿ ನಿರತನಾಗಿದ್ದ ಓರ್ವ ಗಡ್ಡಧಾರಿ ಕಿರಿಯನೊಡನೆ ಓರ್ವ ಮಧ್ಯ ವಯಸ್ಕರು ಕೇಳಿದರು: 'ಏನಪ್ಪಾ, ಈ ಸಣ್ಣ ವಯಸ್ಸಿನಲ್ಲಿ ಇದು ಬೇಕೆ? ಇದು ಜೀವನದ ಸವಿಯನ್ನು ಅನುಭವಿಸಬೇಕಾದ ಸಮಯವಾಗಿದೆ. ಸ್ವಲ್ಪ ವಯಸ್ಸಾದ ಬಳಿಕ ಮಾಡಿದರೆ ಸಾಲದೇ?' ಅದಕ್ಕೆ ಆತ ನೀಡಿದ ಉತ್ತರ ಹೀಗಿತ್ತು: 'ಪ್ರಾಯಶಃ ಮರಣ ಯಾವಾಗ ಬರುವುದೆಂಬ ಸುದ್ದಿ ನಿಮಗೆ ಬಂದಿರಬಹುದು. ನನಗೆ ಅದು ದೊರೆತಿಲ್ಲ. ಹೀಗಿರುತ್ತಾ ನಾನು ಎಷ್ಟರ ತನಕ ಕಾಯಲಿ.' ಆ ಉತ್ತರದಿಂದ ಮಧ್ಯವಯಸ್ಕ ನಿಬ್ಬೆರಗಾದ. ಅನ್ಯಥಾ ಏನು ಮಾಡಲಾದೀತು?

ಈ ಲೋಕದಲ್ಲಿ ಮಾಡಿದ ಕರ್ಮದ ಫಲವು ಇಲ್ಲಿಯೇ ದೊರೆಯಬೇಕೆಂದಿಲ್ಲ. ಫಲ ದೊರೆಯಬಹುದು ಅಥವಾ ದೊರೆಯದಿರಬಹುದು.

ಕುರ್‌ಆನ್ ಈ ವಿಷಯವನ್ನು ಹೀಗೆ ಸ್ಪಷ್ಟಪಡಿಸಿದೆ.

"ಕಟ್ಟಕಡೆಗೆ ಪ್ರತಿಯೊಬ್ಬನಿಗೂ ಮರಣ ಹೊಂದಬೇಕಾಗಿದೆ ಮತ್ತು ನೀವೆಲ್ಲರೂ ನಿಮ್ಮ ನಿಮ್ಮ ಪ್ರತಿಫಲವನ್ನು ಪುನರುತ್ಥಾನ ದಿನದಂದು ಪಡೆಯುವವರಿದ್ದೀರಿ."

(ಪವಿತ್ರ ಕುರ್‌ಆನ್, 3:185)

ಧಾರ್ಮಿಕ ನಿಯಮಗಳಿಂದ ಸ್ವಲ್ಪವೂ ವ್ಯತಿಚಲಿಸದೆ ಬಾಳುವವರಿಗೆ ಈ ಜಗತ್ತಿನಲ್ಲಿ ಯಾವೊಂದು ಕಷ್ಟವಿಲ್ಲದೆ ಬಾಳಲು ಸಾಧ್ಯವಿದೆಯೇ? ಅವರಿಗೂ ಅವರ ಕುಟುಂಬಗಳಿಗೂ

ರೋಗ ಬರಲಾರದೇ? ನಾನಾ ರೀತಿಯ ಸಂಕಷ್ಟಗಳನ್ನು ಇತರರಂತೆಯೇ ಅವರೂ ಅನುಭವಿಸ ಬೇಕಾಗುವುದಿಲ್ಲವೇ?

ಈ ವಿಷಯದಲ್ಲಿ ಎರಡನೆ ಮತ್ತು ಮೂರನೆ ಖಲೀಫರ ಜೀವನ ಮತ್ತು ಅವರ ಅಂತ್ಯವೂ ನಮಗೆ ಉತ್ತಮ ಪಾಠವಾಗಿದೆ.

ಎರಡನೆ ಖಲೀಫ ಉಮರ್‌ರು(ರ) ನಿರಾಡಂಬರ ಜೀವನ ಸಾಗಿಸಿ, ಧಾರ್ಮಿಕ ನಿಯಮಗಳನ್ನು ಕೈಬಿಡದೆ ಆಡಳಿತದ ಹೊಣೆಗಾರಿಕೆಗಳನ್ನು 100% ಪಾಲಿಸಿ ಬಾಳಿದ ಮಹಾ ಪುರುಷರಾಗಿದ್ದರು. ಆದರೂ ಅವರ ಅಂತ್ಯ ಹೇಗಾಯಿತು? ನಮಾಝ್‌ನ ವೇಳೆಯಲ್ಲಿ ಓರ್ವ ವೈರಿಯು ಇರಿದು ಕೊಂದನು. ಅವರು ಏನಾದರೂ ಪಾಪ ಕಾರ್ಯ ಮಾಡಿದ್ದರಿಂದ ಹಾಗಾಯಿತೇ? ಖಂಡಿತಾ ಅಲ್ಲ.

ಮೂರನೆ ಖಲೀಫ ಉಸ್ಮಾನ್‌ರವರ(ರ) ಸ್ಥಿತಿಯೇನು? ಅವರು ಬಹಳ ಭಕ್ತಿಪೂರ್ಣ ಜೀವನ ಸಾಗಿಸಿದ್ದರು. ವೈರಿಗಳೊಂದಿಗೂ ದಯೆ ದಾಕ್ಷಿಣ್ಯದಿಂದ ಬಾಳಿದ ಅವರ ಅಂತ್ಯ ಹೇಗಾಯಿತು? ಆ ವಯೋವೃದ್ಧರನ್ನು ವೈರಿಗಳು ಮೂರುದಿನ ಮುತ್ತಿಗೆ ಹಾಕಿ ಹಸಿವೆಗೆ ಕೆಡವಿದರು. ನಾಲ್ಕನೆ ದಿನ ಕುರ್‌ಆನ್ ಪಾರಾಯಣ ಮಾಡುತ್ತಿದ್ದಾಗ ಗಡ್ಡ ಹಿಡಿದೆಳೆದು ಕೊರಳು ಕೊಯ್ದು ಕೊಂದರು. ಅದು ಕೂಡಾ ಮುಸ್ಲಿಮರು! ಆದ್ದರಿಂದ ಇಹಲೋಕ ಜೀವನದಲ್ಲಿ ನಾವೆಷ್ಟೇ ಉತ್ತಮವಾಗಿ ವರ್ತಿಸಿದರೂ ಅದರ ಪ್ರತಿಫಲವು ಇಲ್ಲಿಯೇ ದೊರೆತೀತೆನ್ನುವಂತಿಲ್ಲ. ಕೆಲವೊಮ್ಮೆ ಕಠಿಣ ಪರೀಕ್ಷೆಗಳಿಗೂ ನಾವು ಗುರಿಯಾಗಬೇಕಾದೀತು.

ಆಪ್ತ ಬಂಧುಗಳಿಗೆ ಅನಾರೋಗ್ಯವಾದರೆ ಅಥವಾ ವ್ಯಾಪಾರದಲ್ಲಿ ನಷ್ಟವುಂಟಾದರೆ, "ದೇವಾ, ನಾನು ಯಾವ ತಪ್ಪು ಮಾಡಿದ್ದೇನೆ? ಯಾಕೆ ಹೀಗೆ ಸತಾಯಿಸುತ್ತಿರುವೆ? ನಿನ್ನ ಆಜ್ಞೆಗಳಿಗೆ ವಿರುದ್ಧವಾಗಿ ನಡೆಯುವವರಿಗೆ ನೀನು ಎಷ್ಟೊಂದು ಸೌಭಾಗ್ಯವನ್ನು ನೀಡುತ್ತಿರುವೆ" ಎಂದು ಕೆಲವರು ಹೇಳುತ್ತಾರೆ. 'ಅಲ್ಲಾಹನು ಕರುಣಾಮಯಿ ಮತ್ತು ನ್ಯಾಯಪಾಲಕ' ಎಂಬ ಮಾತು ಸರಿಯೋ ಎಂದು ಕೂಡಾ ಕೆಲವರು ಸಂಶಯ ಪಡುತ್ತಾರೆ. ಅದಕ್ಕೆ ಉತ್ತರವೆಂಬಂತೆ ಕುರ್‌ಆನಿನಲ್ಲಿ ಅನೇಕ ಕಡೆಗಳಲ್ಲಿ ನಮಗೆ ಹೀಗೆ ನೆನಪಿಸಿದ್ದಾನೆ:

**"ಸತ್ಯನಿಷೇಧ ಮಾರ್ಗವನ್ನು ಸ್ವೀಕರಿಸಿಕೊಂಡವರಿಗೆ ಭೂಲೋಕ ಜೀವನವು ಅತ್ಯಂತ ಮನಮೋಹಕವಾಗಿ ಮಾಡಲ್ಪಟ್ಟಿದೆ. ಇಂತಹವರು ಸತ್ಯವಿಶ್ವಾಸ ಮಾರ್ಗ ಸ್ವೀಕರಿಸಿದವರನ್ನು ಅಪಹಾಸ್ಯ ಮಾಡುತ್ತಾರೆ. ಆದರೆ, ಪುನರುತ್ಥಾನ ದಿನದಂದು ಅವರ ಎದುರಾಗಿ ಧರ್ಮ ನಿಷ್ಠರೇ ಅತ್ಯುನ್ನತ ಪದವಿಯಲ್ಲಿರುವರು. ಭೂಲೋಕದ ಜೀವನಾಧಾರವನ್ನಂತು ತಾನಿಚ್ಛಿಸಿದವರಿಗೆ ಅಮಿತವಾಗಿ ನೀಡಲು ಅಲ್ಲಾಹನು ಅಧಿಕಾರವುಳ್ಳವನಾಗಿರುತ್ತಾನೆ."**

**(ಪವಿತ್ರ ಕುರ್‌ಆನ್, 2:212)**

ಈ ವಿಷಯವನ್ನು ಇನ್ನೊಂದು ವಚನದಲ್ಲಿ ಕುರ್‌ಆನ್ ಸ್ಪಷ್ಟಪಡಿಸಿದೆ:

**"ವಾಸ್ತವದಲ್ಲಿ ನಾವು ಪರಲೋಕದ ಮೇಲೆ ವಿಶ್ವಾಸವಿರಿಸದವರಿಗೆ ಅವರ ದುಷ್ಕೃತ್ಯಗಳನ್ನು ಮನೋಹರವಾಗಿಸಿ ಬಿಟ್ಟಿದ್ದೇವೆ. ಆದುದರಿಂದ ಅವರು ದಾರಿ ತಪ್ಪಿ ಅಲೆದಾಡುತ್ತಾರೆ."** **(ಪವಿತ್ರ ಕುರ್‌ಆನ್, 27:4)**

ಕುರ್‌ಆನಿನಲ್ಲಿ ಇನ್ನೊಂದೆಡೆ ಹೀಗೆ ಹೇಳಲಾಗಿದೆ:

"ಓ ಪೈಗಂಬರರೇ, ನಾಡುಗಳಲ್ಲಿ ಅಲ್ಲಾಹನ ಅವಿಧೇಯ ದಾಸರ ಮೆರೆದಾಟವು ನಿಮ್ಮನ್ನು ವಂಚಿಸದಿರಲಿ. ಇದು ಕೇವಲ ಕೆಲವೇ ದಿನಗಳ ಬಾಳುವೆಯ ಕಿಂಚಿತ್ ಸುಖಭೋಗ. ಅನಂತರ ಇವರೆಲ್ಲರೂ ಅತಿ ನಿಕೃಷ್ಟ ವಾಸಸ್ಥಾನವಾಗಿರುವ ನರಕಾಗ್ನಿಯನ್ನು ಸೇರುವರು." (ಪವಿತ್ರ ಕುರ್‌ಆನ್, 3:196-197)

ಈ ಲೋಕದಲ್ಲಿ ಮದ್ಯಪಾನ, ವ್ಯಭಿಚಾರ ಇತ್ಯಾದಿ ದುಷ್ಕರ್ಮಗಳನ್ನು ಮಾಡುವವರು ನಮ್ಮ ದೃಷ್ಟಿಯಲ್ಲಿ ಉತ್ತಮ ಜೀವನ ಸಾಗಿಸುತ್ತಿರಬಹುದು. ಅವರ ವ್ಯಾಪಾರವು ಅಭಿವೃದ್ಧಿ ಹೊಂದುತ್ತಿರಬಹುದು. ಅವರು ಮುಟ್ಟಿದ್ದೆಲ್ಲ ಚಿನ್ನವಾಗುತ್ತಿರಬಹುದು. ಆದರೂ ನಾವು ಅದರಿಂದ ವಂಚಿತರಾಗಬಾರದು. ನಾವು ನಿರಾಶರಾಗಬಾರದು. ಈ ಲೋಕದಲ್ಲಿ ಅವರ ಜೀವನವು ಅಲ್ಪಕಾಲಿಕವಾಗಿದೆ. ಪರಲೋಕ ಜೀವನವೇ ಶಾಶ್ವತವಾಗಿದೆ. ಈ ಲೋಕದಲ್ಲಿ ಮಾಡಿದ ಕರ್ಮಗಳಿಗೆ ಅಲ್ಲಿ ಪ್ರತಿಫಲ ದೊರೆತೇ ತೀರುವುದು.

ﷺ

# ಅನಂತವಾದ ಪ್ರಾರ್ಥನೆ

ಪ್ರಾರ್ಥನೆಯಿಂದ ಯಾವುದೇ ಪ್ರಯೋಜನವಿಲ್ಲ, ಯಾವುದೇ ಅಗತ್ಯಗಳಿಗಾಗಿ ಪ್ರಾರ್ಥಿಸಬೇಕಾಗಿಲ್ಲವೆಂದು ಭಾವಿಸಬಾರದು. ಪ್ರವಾದಿ ಚರ್ಯೆಗಳನ್ನು ವಿವರಿಸುವ ಹದೀಸ್‌ಗಳನ್ನು ಪರಿಶೀಲಿಸಿದರೆ ರೋಗ ಶಮನಕ್ಕಾಗಿ, ಸಾಲಮುಕ್ತಿಗಾಗಿ, ಪರೀಕ್ಷೆಗಳಿಂದ ವಿಮೋಚನೆಗಾಗಿ ಪ್ರಾರ್ಥಿಸಿದ್ದು ಕಂಡುಬರುತ್ತದೆ. ಇವೆಲ್ಲವೂ ಇಹಲೋಕದ ವಿಷಯಗಳಲ್ಲವೇ. ಈ ಲೋಕದ ಹಿತಕ್ಕಾಗಿ ಪ್ರಾರ್ಥಿಸಬಹುದೇ ಎಂಬ ಪ್ರಶ್ನೆಯು ಇಲ್ಲಿ ಪ್ರಸ್ತುತವಾಗಿದೆ.

ಒಮ್ಮೆ ಸಾಲದಿಂದ ಮುಕ್ತಿಗಾಗಿ ಪ್ರವಾದಿಯವರು(ಸ) ಪ್ರಾರ್ಥಿಸಿದರು. ಯಾವಾಗ ಏತಕ್ಕಾಗಿ ಆ ರೀತಿ ಪ್ರಾರ್ಥಿಸಿದ್ದೆಂದು ಸಹಾಬಿಗಳು ಕೇಳಿದರು. ಸಾಲದಿಂದ ವಿಮುಕ್ತಿಯು ಇಹಲೋಕದ ವಿಷಯವಲ್ಲವೇ ಎಂಬ ಭಾವನೆಯಿಂದ ಅವರು ಆ ರೀತಿ ಪ್ರಶ್ನಿಸಿದ್ದರು. ಪ್ರವಾದಿಯವರು(ಸ) ಆ ಪ್ರಶ್ನೆಗೆ ಹೀಗೆ ಉತ್ತರಿಸಿದರು:

"ಸಾಲವಾದಾಗ ಮಾನವನು ಹೆಚ್ಚು ಮಾತಾಡಿ ಬಿಡಬಹುದು. ಹೆಚ್ಚು ಮಾತಾಡುವಾಗ ಕೆಲವೊಮ್ಮೆ ಸುಳ್ಳು ಹೇಳಬೇಕಾದೀತು. ಅದನ್ನು ತಪ್ಪಿಸಲಿಕ್ಕಾಗಿ ನಾನು ಸಾಲದಿಂದ ವಿಮುಕ್ತಿಗಾಗಿ ಪ್ರಾರ್ಥಿಸುತ್ತೇನೆ."

ಈ ಪ್ರವಾದಿ ವಚನದಲ್ಲಿ ಬಹುದೊಡ್ಡ ನೀತಿ ಪಾಠವಿದೆ. ಪರಲೋಕ ಜೀವನದ ಹಾದಿಯನ್ನು ಸರಿಪಡಿಸಲಿಕ್ಕಾಗಿಯೇ ನಾವು ಇಂತಹ ಪ್ರಾರ್ಥನೆಗಳನ್ನು ನಡೆಸುತ್ತೇವೆಂಬುದೇ ಆ ಪಾಠ.

ಇದೇ ರೀತಿಯಲ್ಲಿ ಮಾನವನು ರೋಗ ಮುಕ್ತಿಗಾಗಿ ಪ್ರಾರ್ಥಿಸುತ್ತಾನೆ. ರೋಗವು ವಾಸಿಯಾದರೆ ಮಾತ್ರ ಈ ಲೋಕದಲ್ಲಿ ಮಾಡಿ ಮುಗಿಸಬೇಕಾದ ಕರ್ತವ್ಯಗಳನ್ನು ಈಡೇರಿಸಲು ಮಾನವನಿಗೆ ಸಾಧ್ಯ. ಸಮಾಜ ಮತ್ತು ಜನರೊಂದಿಗಿನ ಕರ್ತವ್ಯಗಳ ಈಡೇರಿಕೆಗೂ ಆರೋಗ್ಯದ ಅಗತ್ಯವಿದೆ. ಕೈಕಾಲುಗಳಿಗೆ ಶಕ್ತಿಯಿಲ್ಲದೆ ಮಲಗಿರುವ ಓರ್ವರು ಕೈಕಾಲುಗಳಿಗೆ ಬಲ ದೊರೆಯಲಿಕ್ಕಾಗಿ ಪ್ರಾರ್ಥಿಸುತ್ತಾರೆಂದು ಭಾವಿಸೋಣ. ಈ ಪ್ರಾರ್ಥನೆಯು ಇದಿರಾಳಿಯನ್ನು ಮರ್ದಿಸಲಿಕ್ಕಾಗಿ ಅಥವಾ ಇತರ ದುಷ್ಕೃತ್ಯಗಳ ಉದ್ದೇಶ ದಿಂದಾಗಿದ್ದರೆ ಆ ಪ್ರಾರ್ಥನೆಯು ಇಹಲೋಕಕ್ಕೆ ಸಂಬಂಧಿಸಿದೆಯೆಂದು ಹೇಳಬಹುದು. ಆ ರೀತಿ ಪ್ರಾರ್ಥಿಸಬಾರದು. ಅಂತಹ ಪ್ರಾರ್ಥನೆಗಳಿಗೆ ಪರಲೋಕದಲ್ಲಿ ಪ್ರತಿಫಲ ದೊರೆಯಲಾರದು. ಬದಲಾಗಿ ಶಿಕ್ಷೆ ದೊರೆಯಬಹುದು.

ಇನ್ನೊಂದು ಪ್ರಾರ್ಥನೆಯು ಕಠಿಣ ಪರೀಕ್ಷೆಗಳಿಂದ ಪಾರುಗೊಳಿಸುವುದಕ್ಕಾಗಿದೆ. ಅಸಹ್ಯವಾದ ಹಸಿವೆಗೆ ಗುರಿಯಾದಾಗ ಅಪರಾಧ ಕೃತ್ಯಗಳನ್ನೆಸಗುವ ಭಾವನೆ ಮೂಡ ಬಹುದು. ಸುಳ್ಳು, ವ್ಯಭಿಚಾರ ಇತ್ಯಾದಿಗಳೆಲ್ಲವೂ ಹಸಿವೆಯಿಂದ ಸಂಭವಿಸಬಹುದು. ಆಪತ್ತಿಗೆ ಸಿಲುಕುವ ಭೀತಿಯಿಂದಲೂ ಮಾಡಬಾರದ ಕೆಲಸಗಳಿಗೆ ನಾವು ಮುಂದಾಗ ಬಹುದು. ಹಾಗೆಯೇ ಹಣ ನಷ್ಟವೂ ಅಪರಾಧಗಳಿಗೆ ಪ್ರೇರೇಪಿಸಬಹುದು. ಅತಿ ಸಂಪತ್ತು ಕೆಲವೊಮ್ಮೆ ಮಾನವನ ದಾರಿ ತಪ್ಪಿಸುವ ಸಾಧ್ಯತೆಯಿದೆ. ಇಂತಹ ಪಾಪಗಳಿಂದ ಪಾರಾಗ ಬೇಕೆಂಬ ಉದ್ದೇಶದಿಂದ ನಾವು ಕಠಿಣ ಪರೀಕ್ಷೆಗಳಿಂದ ಮುಕ್ತಿಗಾಗಿ ಪ್ರಾರ್ಥಿಸಬೇಕು. ಐಹಿಕ ವಿಷಯಗಳಿಗಾಗಿ ನಾವು ಮಾಡುವ ಪ್ರಾರ್ಥನೆಯೂ ಪರಲೋಕಕ್ಕೆ ಸಂಬಂಧಿಸಿದೆ ಯೆಂದು ಇದರಿಂದ ವ್ಯಕ್ತವಾಗುತ್ತದೆ.

ಇನ್ನು ಹೇಗೆ ಪ್ರಾರ್ಥಿಸಬೇಕೆಂದು ನೋಡೋಣ. ನಾವು ಇತರರೊಡನೆ ನಮ್ಮ ಅಹವಾಲುಗಳನ್ನು ತೋಡಿಕೊಳ್ಳುವಾಗ ಅಥವಾ ಬೇಡಿಕೆಗಳನ್ನು ಮುಂದಿರಿಸುವಾಗ ಏನು ಮಾಡುತ್ತೇವೆ? ಹೇಳಬೇಕಾದುದನ್ನು ಮೊದಲು ಮನಸ್ಸಿನಲ್ಲಿ ಖಾತ್ರಿಪಡಿಸುತ್ತೇವೆ. ಅನಂತರ ವಿನಯ ಮತ್ತು ಭಯ ಭಕ್ತಿಯಿಂದ ನಾವು ಅದನ್ನು ಮುಂದಿರಿಸುತ್ತೇವೆ. ನಮಗೆ ಎಷ್ಟರ ಮಟ್ಟಿಗೆ ಹೇಳಿ ಮನವರಿಕೆ ಮಾಡಿಸಲು ಸಾಧ್ಯವಿದೆಯೋ ಆ ಪ್ರಕಾರ ನಮಗೆ ಪ್ರತಿಫಲ ದೊರೆಯುತ್ತದೆ. ಅಪೇಕ್ಷೆ ಸಲ್ಲಿಸುವ ಸ್ಥಾನದ ಘನತೆಗೆ ತಕ್ಕಂತೆ ವಿನಮ್ರತೆ ಹೆಚ್ಚುತ್ತದೆ. ಯಾವುದಾದರೊಂದು ವಿಷಯವನ್ನು ರೆವೆನ್ಯೂ ಇನ್ಸ್‌ಪೆಕ್ಟರ್, ಕಲೆಕ್ಟರ್, ಮಂತ್ರಿ, ಮುಖ್ಯಮಂತ್ರಿ ಮುಂತಾದವರೊಡನೆ ಮಾತಾಡುವುದು ಒಂದೇ ಪ್ರಕಾರವಾಗಿರಬಾರದು. ಸ್ಥಾನಮಾನದ ಘನತೆಗೆ ತಕ್ಕಂತೆ ವಿನಯ ಮತ್ತು ಭಯ ಭಕ್ತಿಯೂ ಹೆಚ್ಚುತ್ತದೆ.

ಸರ್ವಶಕ್ತನಾದ ಅಲ್ಲಾಹನು ಪ್ರಪಂಚದ ಸೃಷ್ಟಿಕರ್ತ ಮತ್ತು ಅತ್ಯಂತ ಮಹಾನ ನಾಗಿದ್ದಾನೆ. ಹಾಗಾದರೆ ಆತನೊಡನೆ ಏನಾದರೂ ಅಹವಾಲುಗಳನ್ನು ತೋಡಿಕೊಳ್ಳುವಾಗ ಅದು ಯಾವ ರೀತಿಯಲ್ಲಿರಬೇಕು? ಒಂದನೆಯದಾಗಿ ನಾವು ಏನು ಹೇಳುವುದೆಂದು ನಮಗೆ ತಿಳಿದಿರಬೇಕು. ನಾವು ಅಲ್ಲಾಹನ ಸನ್ನಿಧಾನದಲ್ಲಿದ್ದೇವೆಂದು ತಿಳಿದು ಅತ್ಯಂತ ವಿನಯ ಮತ್ತು ಭಯಭಕ್ತಿಯಿಂದ ವಿಷಯಗಳನ್ನು ಮಂಡಿಸಬೇಕು. ತಿಳಿಯದ ಭಾಷೆಯಲ್ಲಿ ಏನೇನೋ ಉಚ್ಚರಿಸಿದರೆ ನಮ್ಮಲ್ಲಿ ವಿನಮ್ರತೆ ಅಥವಾ ಭಯಭಕ್ತಿ ಮೂಡಲಾರದು. ಅದಕ್ಕೆ ನಾವು ನಿರೀಕ್ಷಿಸುವ ಫಲಪ್ರಾಪ್ತಿಯಾಗಲಾರದು. ಈ ಎಲ್ಲ ಅಂಶಗಳನ್ನು ಎರಡು ವಚನಗಳಲ್ಲಿ ಕುರ್‌ಆನ್ ವಿವರಿಸಿದೆ.

**"ನಿಮ್ಮ ಪ್ರಭುವನ್ನು ಭಯ ವಿನಯದೊಂದಿಗೆ ಮತ್ತು ರಹಸ್ಯವಾಗಿ ಪ್ರಾರ್ಥಿಸಿರಿ."**

**(ಪವಿತ್ರ ಕುರ್‌ಆನ್, 7:55)**

ಶ್ರದ್ಧೆ ಮತ್ತು ಏಕಾಗ್ರಚಿತ್ತತೆಗಾಗಿ ವಿನಮ್ರತೆ ಮತ್ತು ರಹಸ್ಯವಾಗಿ ಪ್ರಾರ್ಥಿಸುವಂತೆ ಉಪದೇಶಿಸಲಾಗಿದೆ. ಸಾಮೂಹಿಕ ಮತ್ತು ಬಹಿರಂಗವಾಗಿ ಪ್ರಾರ್ಥಿಸಲೇ ಬಾರದೆಂಬುದು ಇದರರ್ಥವಲ್ಲ. ರಹಸ್ಯವಾಗಿ ಪ್ರಾರ್ಥಿಸುವಾಗ ದೊರೆಯುವ ಶಕ್ತಿ ಮತ್ತು ಏಕಾಗ್ರತೆಯು ಬಹಿರಂಗವಾಗಿ ಪ್ರಾರ್ಥಿಸುವಾಗ ದೊರೆಯಲಾರದು.

ಇನ್ನೊಂದು ವಚನದಲ್ಲಿ ಕುರ್‌ಆನ್ ಹೀಗೆ ಹೇಳಿದೆ:

**"ಭಯದೊಂದಿಗೂ ಆಶೆಯೊಂದಿಗೂ ಅಲ್ಲಾಹನನ್ನೇ ಕೂಗಿ ಪ್ರಾರ್ಥಿಸಿರಿ."**

**(ಪವಿತ್ರ ಕುರ್‌ಆನ್, 7:56)**

ಹಿಂದೆ ಸೂಚಿಸಿರುವಂತೆಯೇ ಅತ್ಯಂತ ಮಹಾನ್ ಮತ್ತು ಸರ್ವಶಕ್ತನಾಗಿರುವ ಅಲ್ಲಾಹನ ಸನ್ನಿಧಾನದಲ್ಲಿ ನಾವು ನಮ್ಮ ಅಹವಾಲುಗಳನ್ನು ಸಮರ್ಪಿಸುತ್ತಿರುವೆವೆಂಬ ಪ್ರಜ್ಞೆಯಿಂದ ಪ್ರಾರ್ಥಿಸಿದರೆ ಆಗ್ರಹ ಮತ್ತು ನಿರೀಕ್ಷೆಯು ನಿಷ್ಫಲವಾಗಲಾರದು.

ಈ ಎಲ್ಲ ವಿಷಯಗಳನ್ನು ಹೀಗೆ ಸಂಕ್ಷೇಪಿಸಬಹುದು:

ಪ್ರಾರ್ಥನೆಯು ವಿಶ್ವಾಸಿಗೆ ಇಬಾದತ್ ಆಗಿದೆ. ಅದರ ಪ್ರಯೋಜನಗಳು ಪರಲೋಕಕ್ಕೆ ಸಂಬಂಧಿಸಿದೆ. ಲೌಕಿಕ ಉದ್ದೇಶ ಮತ್ತು ವಿಶೇಷ ಪರಿಸ್ಥಿತಿಗಳು ಕೇವಲ ಅದರ ಸಂದರ್ಭಗಳಾಗಿವೆ. ಪ್ರಾರ್ಥನೆಯು ವಿಶ್ವಾಸಿಯ ಭಯ ಮತ್ತು ದೌರ್ಬಲ್ಯಗಳನ್ನು ನಿವಾರಿಸಿ ಸಹಾಯ ಹಸ್ತವಾಗಿ ವರ್ತಿಸುತ್ತದೆ. ಪ್ರಾರ್ಥನೆಯಿಂದ ಈ ಲೋಕದಲ್ಲಿ ಕೆಲವೊಮ್ಮೆ ಬೇಡಿಕೆಗಳು ಸ್ವೀಕೃತವಾಗುತ್ತವೆ. ಕೆಲವೊಮ್ಮೆ ಬೇಡಿಕೆಗಿಂತ ಅಧಿಕ ದೊರೆಯುತ್ತದೆ. ಪ್ರಾರ್ಥನೆ ತಿರಸ್ಕೃತವಾಗುವ ಸಂದರ್ಭಗಳೂ ಇರಬಹುದು. ಎಲ್ಲವೂ ಅಲ್ಲಾಹನ ಇಚ್ಛೆಗೆ ಬದ್ಧವಾಗಿರುವುದು. ಅವು ಮಾನವನ ನಿಯಂತ್ರಣಗಳಿಗೆ ಅಧೀನ ವಾಗಿಲ್ಲ. ಯಂತ್ರ ಅಥವಾ ಸಮಾಜ ನಿಯಂತ್ರಿಸಲ್ಪಡುವುದಿಲ್ಲ. ಅವು ಮಾನವನ ಸ್ವಾರ್ಥ ಮಿಥ್ಯಮೋಹಗಳ ಪ್ರಕಾರ ಈಡೇರುವುದಿಲ್ಲ. ಅನೇಕ ಬಾರಿ ಪ್ರಾರ್ಥಿಸಿಯೂ ಕಷ್ಟಗಳು ನಿವಾರಣೆಯಾಗದಿರುವಾಗ ಹತಾಶರಾಗದೆ ವಿನಮ್ರತೆ ಮತ್ತು ಪ್ರಾರ್ಥನೆಯ ವೇಳೆಯು ಮುಗಿದಿಲ್ಲವೆಂದು ತಿಳಿಯುವುದು ನಮ್ಮ ಕರ್ತವ್ಯವಾಗಿದೆ. ಬೇಡಿಕೆ ಈಡೇರಿದೊಡನೆ ವಿನಮ್ರತೆಯನ್ನು ತೊರೆಯಬಾರದು. ಇವು ವಿಶ್ವಾಸಿಯಾಗಿರುವ ಉತ್ತಮ ದಾಸನ ಕರ್ಮ ಪಥದ ಶಿಷ್ಟಾಚಾರಗಳಲ್ಲಿ ಪ್ರಧಾನವಾಗಿದೆ. ದೌರ್ಬಲ್ಯ ಮತ್ತು ಅಸಹಾಯಕತೆಯ ಸಂದರ್ಭದಲ್ಲಿ ಮಾತ್ರವಲ್ಲ, ಸಾಮರ್ಥ್ಯ ಮತ್ತು ಸೌಭಾಗ್ಯದ ಸ್ಥಿತಿಗಳಲ್ಲಿಯೂ ಸರ್ವಶಕ್ತನ ಸನ್ನಿಧಿಯಲ್ಲಿ ಸಂಯಮ ಮತ್ತು ವಿನೀತ ಪ್ರಾರ್ಥನೆಯಿಂದ ಹಾಜರಾಗ ಬೇಕಾದುದು ಮಾನವನ ಕರ್ತವ್ಯವಾಗಿದೆ. ಪರಾವಲಂಬಿಯಾಗಿರುವ ಮಾನವನು ಅದರಲ್ಲಿ ಕೊರತೆ ಮಾಡಬಾರದು. ಪ್ರಾರ್ಥನೆಯ ಮೂಲಕ ಪ್ರಪಂಚ ಸೃಷ್ಟಿಯ ಸೌಂದರ್ಯ ಮತ್ತು ಮಹಾತ್ಮೆಗೆ ಮಾದರಿಯಾಗಲು ಮಾನವನು ಪ್ರಯತ್ನಿಸಬೇಕು. ಪ್ರಾರ್ಥನೆಯು

ಕರುಣೆಯ ನಿಧಿ, ಮಾನವೀಯತೆಯ ಹಾದಿ ಮತ್ತು ಶಕ್ತಿಯ ಮೂಲವಾಗಿದೆ. ಜೀವನವು ಕೊನೆಯಿಲ್ಲದ ಪ್ರಾರ್ಥನೆಯೇ ಆಗಿದೆ.

ಪಾಪ ವಿಮೋಚನೆಯ ಪ್ರಾರ್ಥನೆಗಳಲ್ಲಿ ಅತ್ಯಂತ ಶ್ರೇಷ್ಠವೆಂದು ಪ್ರವಾದಿವರ್ಯರು(ಸ) ಹೇಳಿದ ಮತ್ತು ಶದ್ದಾದ್ ಬಿನ್ ಔಸ್(ರ) ವರದಿ ಮಾಡಿರುವ ಒಂದು ಪ್ರಾರ್ಥನೆಯನ್ನು ಉದ್ಧರಿಸಿ ಈ ಕೃತಿಯನ್ನು ಮುಕ್ತಾಯಗೊಳಿಸುತ್ತೇನೆ.

"ಓ ಅಲ್ಲಾಹ್, ನೀನೇ ನನ್ನ ಪ್ರಭು. ನಿಶ್ಚಯವಾಗಿಯೂ ನಿನ್ನ ಹೊರತು ಅನ್ಯ ಆರಾಧ್ಯರಿಲ್ಲ. ನೀನೇ ನನ್ನ ಸೃಷ್ಟಿಕರ್ತ. ನಾನು ನಿನ್ನ ದಾಸ. ನಿನ್ನೊಡನೆ ಮಾಡಿರುವ ಕರಾರು ಮತ್ತು ವಾಗ್ದಾನಗಳನ್ನು ನಾನು ಗರಿಷ್ಠ ಪಾಲಿಸುತ್ತೇನೆ. ನನ್ನ ಕರ್ಮಗಳ ದೋಷ ಫಲಗಳಿಂದ ಪಾರಾಗಲಿಕ್ಕಾಗಿ ನಾನಿದೋ ನಿನ್ನೊಡನೆ ಅಭಯ ಯಾಚಿಸುತ್ತೇನೆ. ನೀನು ನನಗೆ ನೀಡಿರುವ ಅನುಗ್ರಹಗಳೊಂದಿಗೆ ನಾನಿದೋ ನಿನ್ನೆಡೆಗೆ ಮರಳುತ್ತೇನೆ. ನನ್ನ ಪಾಪ ಗಳೊಂದಿಗೂ ನಾನು ಮರಳುತ್ತೇನೆ. ಆದ್ದರಿಂದ ನೀನು ನನ್ನನ್ನು ಕ್ಷಮಿಸು. ಪಾಪಗಳನ್ನು ಕ್ಷಮಿಸವವರು ನಿನ್ನ ಹೊರತು ಇನ್ನಾರೂ ಇಲ್ಲ.

